# ಕರ್ಮವೀರ

ಜನಪ್ರಿಯ ಸಚಿತ್ರ ವಾರಪತ್ರಿಕೆ - ಹುಬ್ಬಳ್ಳಿ.

೮ - ೮ - ೪೯

★

ಬೆಲೆ ಎರಡಾಣೆ




ಮುಂಬಯಿ ವಿಶ್ವವಿದ್ಯಾಲಯದ ಗಡಿಯಾರದ ಗೋಪುರ


Karmaveer. KANNADA ILLUSTRATED WEEKLY HUBLI

ಮಕ್ಕಳಿಗಾಗಿ

# ದೈವಲೀಲೆ

ಇಂದು ಲೀಲೆಯು ತಾಯಿಯಿಲ್ಲದ ತಬ್ಬಲಿ, ನಿರ್ಗತಿಕಳು. ಇಷ್ಟು ಸಣ್ಣ ವಯಸ್ಸಿನಲ್ಲಿ ಈ ಸ್ಥಿತಿಗೆ ಬಂದ ಲೀಲೆಯನ್ನು ಅವಳ ಅಜ್ಜಿಯ ಯಜಮಾನಿಯು ಅವಳ ಅಜ್ಜಿಯೊಡನೆ ತನ್ನ ಮನೆಯಲ್ಲಿರಿಸಿಕೊಂಡಳು.

ತಿಂಗಳುಗಳ ಮೇಲೆ ತಿಂಗಳು, ವರ್ಷಗಳ ಮೇಲೆ ವರ್ಷ ಉರುಳಿದಂತೆ ಲೀಲೆಯು ಎಲ್ಲವನ್ನೂ ಮರೆತು, ಗೆಳತಿ ಮೀರೆಯೇ ತನ್ನ ಸರ್ವಸ್ವವೆಂದು ತಿಳಿದು ಸುಖವಾಗಿ ಬೆಳೆಯತೊಡಗಿದಳು. ಯಜಮಾನಿಯ ಮಗಳಾದ ಮೀರೆ ಕೂಡ ಇವಳ ಸರಿ ಸಮಾನಳಾದಳು.

ಮೀರೆಯ ತಾಯಿತಂದೆಗಳಿಗೆ ಮೀರೆಯ ಲಗ್ನದ ವಿಚಾರ ಶುರುವಾಗಿತ್ತು. ಇಷ್ಟರಲ್ಲೇ ಒಂದೆರಡು ಕಡೆ ನೋಡಿದ್ದೂ ಆಗಿತ್ತು. ಅವರ ಮನೆಗೆ ವಧುವನ್ನು ನೋಡಲಿಕ್ಕೆ ಬಂದವರು ಇಬ್ಬರನ್ನೂ ನೋಡಿ "ನಾವು ಲೀಲೆಯನ್ನು ಮಾಡಿಕೊಳ್ಳುತ್ತೇವೆಂದು" ಅನ್ನುತ್ತಿದ್ದರು. ಹೀಗೆಯೆ ಅವರ ತಮ್ಮ ಮಗಳ ಲಗ್ನವಾಗಲಿಕ್ಕಿಲ್ಲವೆಂದು ಲೀಲೆಯನ್ನು ಬೇರೆ ಊರಿಗೆ, ತಮ್ಮ ಸಂಬಂಧಿಕರ ಮನೆಗೆ ಕೊಟ್ಟು ಕಳುಹಿದರು. ಪಾಪ, ಲೀಲೆಯು ಎಷ್ಟಾದರೂ ಪರದೇಶಿ. ಬೇರೆಯವರ ಮನೆಯ ಉಪ್ಪನ್ನು ಉಂಬುವವಳು. ಅವರು ಹೇಳಿದ್ದನ್ನು ಕೇಳಲೇ ಬೇಕು. ಆಯಿತು ಹೋಗುತ್ತೇನೆಂದು, ಮೀರೆಯನ್ನು ಬಿಟ್ಟು, ಕೀಳಲಾರದ ಕಾಲುಗಳನ್ನು ಕಿತ್ತು, ಹೋದಳು.

ಆ ಊರಾದರೂ ತಾನು ಈ ಮೊದಲು ಇದ್ದ ಊರಿಗಿಂತ ದೊಡ್ಡದು. ಎಲ್ಲ ರೀತಿಯ ನವ ನಾಗರಿಕತೆಗಳಿಂದ ಮುಂದುವರಿದದು. ಇವಳು ಇಳಿದುಕೊಂಡವರ ಮನೆಯವರೂ ಬಹಳ ಮುಂದುವರಿದವರು. ಸುಧಾರಿಕೆಯ ಎಲ್ಲ ಚಿಹ್ನಗಳೂ ಇವರ ಮನೆಯಲ್ಲಿದ್ದವು. ಇಲ್ಲಿಗೆ ಬಂದ ಮೇಲೆ ಲೀಲೆಗೆ ಸ್ವತಂತ್ರತೆಯು ಬಹಳವಾಗಿ ದೊರೆಯಿತು. ಮನೆಯವರು ಎಲ್ಲಿ ಹೋದರು ಲೀಲೆಯು ಅವರ ಜೊತೆಗೆ ಇರುವವಳೇ. ಹೀಗಾಗಿ ಇವಳಿಗೆ ಬಹಳ ಜನರ ಪರಿಚಯವಾಯಿತು. ಲೀಲೆಯು ತನ್ನ ಗುಣಗಳಿಂದ ಮನೆಯವರ ಅಚ್ಚುಮೆಚ್ಚಿನ ಮಗಳಾಗಿದ್ದಳು. ಆ ಮನೆಯವರಿಗೆ ಲೀಲೆಯನ್ನು ಎಷ್ಟು ಹೊಗಳಿದರೂ ಸಾಲದು, ಆದ್ದರಿಂದ ಅವರ ಪರಿಚಯದವರಿಗೆಲ್ಲ, ನಚ್ಚಿನ ಲೀಲೆಯಾಗಿದ್ದಳು.

ಇದ್ದಕ್ಕಿದ್ದಂತೆ ಒಂದು ದಿನ ಇವರ ಮನೆಯ ಮುಂದೆ ಒಂದು ಕಾರು ನಿಂತಿತು. ಅದರೊಳಗಿಂದ ಸೂಟು ಬೂಟಿನ ಒಬ್ಬ ಸಭ್ಯ ಗೃಹಸ್ಥನು ಇಳಿದು ನೇರವಾಗಿ ಒಳಗೆ ಬಂದನು. ಇವನು ಬಂದದ್ದನ್ನು ನೋಡಿ ಲೀಲೆಯು ಒಳಗೆ ಹೋಗಿ ಹೇಳಿದ ಕೂಡಲೆ, ಮನೆಯವರು ಬಂದು, ಬಂದ ಅತಿಥಿಯನ್ನು ಒಳ್ಳೆಯ ಆದರ ಸತ್ಕಾರಗಳಿಂದ ಬರಮಾಡಿಕೊಂಡರು. ಮುಂದೆ ಆ ಅತಿಥಿಯು ಎಲ್ಲಿಯೂ ಹೋಗದೆ ಅಲ್ಲಿಯೇ ಬೀಡಾರ ಬಿಟ್ಟನು.

ಲೀಲೆಯು ಇವುಗಳನ್ನೆಲ್ಲ ನೋಡುತ್ತ ಇವರ ಸಂಬಂಧಿಕನಿರಬಹುದೆಂದು ತಿಳಿದು, ತನ್ನಷ್ಟಕ್ಕೆ ತಾನು ಇರತೊಡಗಿದಳು. ಮನೆಯ ಯಜಮಾನಿಯು— ಮಾಲತಿಬಾಯಿಯು— ಲೀಲೆಯ ಪರಿಚಯವನ್ನು ಬಂದ ಅತಿಥಿಗೆ ಮಾಡಿ ಕೊಟ್ಟಳು. ಲೀಲೆಯು ವಾಚಾಳಿಯಲ್ಲದಿದ್ದರೂ ಮೌನವ್ರತಧಾರಿಯೇನಲ್ಲ. ಪರಿಚಯವಾಯಿತೆಂದರೆ ಒಳ್ಳೆಯ ರೀತಿಯಿಂದ ಮಾತುಕತೆಗಳನ್ನಾಡುತ್ತಿದ್ದಳು. ಹಾಗೆಯೇ ಅವನ ಕೂಡ ಸಹ ಇದ್ದಳು. ಅತಿಥಿಯು— ಶ್ಯಾಮನು— ಲೀಲೆಯ ಗುಣಕ್ಕೆ ಮರುಳಾಗಿದ್ದನು. ಏನಾದರೂ ನೆವ ತೆಗೆದುಕೊಂಡು ಇವಳ ಕೂಡ ಮಾತಾಡುತ್ತಿದ್ದನು. ಹೀಗೆಯೇ ಮಾಡುತ್ತ ಅವರಿಬ್ಬರಲ್ಲಿ ಸ್ನೇಹದ ಮೊಳಕೆಯು ಎದ್ದು ಬೆಳೆದು ಗಿಡವಾಯಿತು. ಇದಕ್ಕೆಲ್ಲ ಮನೆಯವರ ಅನುಮತಿ ಇದ್ದಿರಬಹುದೆಂದೇ ಅವರು ಇವರಿಗೆ, ಅನುಕೂಲವಾಗಿಯೇ ಇದ್ದರು. ಇಷ್ಟರಲ್ಲಿ ಅವರ ದೃಷ್ಟಿಗಳು ಎಷ್ಟೋ ಸಾರೆ ಒಂದಾಗಿರಬಹುದು. ಎಷ್ಟೋ ಸಾರೆ ಒಬ್ಬರಿಗೊಬ್ಬರ ಸ್ಪರ್ಶವಾಗಿ ಇಬ್ಬರ ಅಂಗಾಂಗಗಳಲ್ಲಿ ವಿದ್ಯುತ್ಸಂಚಾರವಾಗಿರಬಹುದು. ಆದರೂ ಇವರು ತಮ್ಮ ತಮ್ಮ ಗುಟ್ಟನ್ನು ಬಯಲು ಮಾಡಿರಲಿಲ್ಲ. ಇಬ್ಬರ ಗುಟ್ಟೂ ಒಂದೇ ಇದ್ದಿರಬಹುದು. ಒಬ್ಬರಿಗೊಬ್ಬರಿಗೆ ಹೇಳಲು ಧೈರ್ಯವಾಗಿರಲಿಲ್ಲ. ಒಂದು ದಿನ ಮನೆಯಲ್ಲಿ ಯಾರೂ ಇರಲಿಲ್ಲ. ಲೀಲೆಯೊಬ್ಬಳೇ ಇದ್ದಳು. ಅವನು— ಶ್ಯಾಮನು— ತಿರುಗಾಡಿಕೊಂಡು ಬಂದನು. ಮನೆಯಲ್ಲಿ ಯಾರೂ ಇಲ್ಲವೆಂಬುದನ್ನು ತಿಳಿದು ಲೀಲೆಯಿದ್ದ ರೂಮಿಗೆ ಹೋದನು. ಲೀಲೆಯು ಕೂಡ ಮುಗುಳ್ನಗೆಯಿಂದ ಅವನನ್ನು ಸ್ವಾಗತಿಸಿದಳು. ಇಬ್ಬರೂ ಇದಿರು ಬದಿರಿನಲ್ಲಿ ಒಬ್ಬರ ಮುಖ ಒಬ್ಬರು ನೋಡುತ್ತ ಕುಳಿತರು. ಒಬ್ಬರ ಬಾಯಿಂದಲೂ ಮಾತೇ ಹೊರಬೀಳಲೊಲ್ಲವು. ಇಬ್ಬರ ದೃಷ್ಟಿಗಳು ಏಕವಾದವು. ಇಬ್ಬರ ನಯನಗಳು ತಮ್ಮ ತಮ್ಮ ಇಂಗಿತಾರ್ಥವನ್ನು ಹೇಳಿದವು. ಇಬ್ಬರ ಹೃದಯಗಳೂ ಅವುಗಳನ್ನು ಒಪ್ಪಿಕೊಂಡವು. ಇಬ್ಬರ ಮನಸ್ಸುಗಳು "ತಾವು ಈ ಮೊದಲೆ ಯಾಕೆ ಹೇಳಿಕೊಳ್ಳಲಿಲ್ಲ" ವೆಂದು ಪಶ್ಚಾತ್ತಾಪ ಪಟ್ಟವು.

ಇಷ್ಟರಲ್ಲಿ ಶ್ಯಾಮನೇ ಮೌನವನ್ನು ಮುರಿದು "ಲೀಲಾ ನಿನ್ನ ಮನಸ್ಸಿನಲ್ಲಿದ್ದುದನ್ನು ಈ ಮೊದಲೇ ಹೇಳಿಬಿಡಬಾರದಾಗಿತ್ತೇ? ನಾನು ಇಷ್ಟು ದಿನಗಳವರೆಗೆ ಯೋಚಿಸುತ್ತಿದ್ದೆನೇಕೆ?" ಎಂದು ಕೇಳಿದನು.

ಅದಕ್ಕೆ ಲೀಲೆಯು "ಹೌದು ಹೇಳಬಹುದಾಗಿತ್ತು, ಆದರೆ— ನಾನು ಯಾರ ಹತ್ತಿರವೂ ನನ್ನ ಇಚ್ಛೆಯನ್ನು ಹೇಳಲಾರೆ. ಪರರ ಅನ್ನದ ಮೇಲೆ ಬೆಳೆದಿರುವೆ. ನನ್ನವರೆಂಬ ಒಂದು ಹುಳುವು ಕೂಡ ಈ ಜಗತ್ತಿನಲ್ಲಿಲ್ಲ" ಎಂದು ಒಂದೇ ಉಸುರಿನಲ್ಲಿ ಹೇಳಿ ಮುಗಿಸಿದಳು. ಕಣ್ಣೀರು ಧಾರಾಕಾರವಾಗಿ ಸುರಿಯುತ್ತಿತ್ತು. ಕೊನೆಗೆ ಶ್ಯಾಮನೇ ಅವಳನ್ನು ಸಮಾಧಾನ ಮಾಡಬೇಕಾಯಿತು. ಅವನಿಗೆ, ಇವಳ ಚರಿತ್ರೆಯನ್ನು ಕೇಳಿ ತನ್ನದಲ್ಲವೂ ನೆನಪಾಗಹತ್ತಿತು.

"ಲೀಲಾ ನಾನಾದರೂ ದೊಡ್ಡ ಶ್ರೀಮಂತನೆಂದು ತಿಳಿದಿರುವೆಯೋ? ನನಗೆ ಬಂಧು ಬಳಗವಿದೆಯೆಂದು ತಿಳಿದೆಯಾ? ಈ ಮನೆಯ ಮಹಾನುಭಾವರು ರಕ್ಷಿಸದಿದ್ದರೆ ಎಂದೋ ನಾನು ಬೀದಿಯ ನಾಯಿಯಾಗುತ್ತಿದ್ದೆ. ಇವರೇ ನನ್ನ ತಾಯಿ, ತಂದೆ, ಬಂಧು, ಬಳಗ. ನಾನು ಹತ್ತು ವರ್ಷದವನಿರುವಾಗಲೇ ನನ್ನ ತಾಯಿಯು ಮನೋವ್ಯಾಧಿಯಿಂದ ತೀರಿಕೊಂಡಳು. ನನ್ನ ತಂದೆಯು ನಾನಾ ತರಹದ ತೊಂದರೆಗೆ ಬಿದ್ದು ನಮ್ಮ ಮನೆಯನ್ನೇ ದುಸ್ಥಿತಿಗೀಡು ಮಾಡಿದನು. ಇದೇ ಏನು ಮಾಡಲೂ ಬರದ ನನ್ನ ತಾಯಿಯ ಕೊರಗಾಗಿ ಇತ್ತು. ತಾಯಿಯು ಸತ್ತು ಒಂದೇ ಒಂದು ವರ್ಷದಲ್ಲಿ ತಂದೆಯು ಕೂಡ ಅದೇ ಹಾದಿಯನ್ನು ಹಿಡಿದ. ಮಾಲತೀಬಾಯಿಯ ಯಜಮಾನರು ನನ್ನ ತಂದೆಯ ಕೇವಲ ಮಿತ್ರರಾದ್ದರಿಂದ ನನ್ನನ್ನು ತಮ್ಮ ಮನೆಯಲ್ಲಿರಿಸಿಕೊಂಡರು. ನಾನು ಮೆಟ್ರಿಕ್— ಪರೀಕ್ಷೆ ಪಾಸಾಗುವತನಕ ನನ್ನ ಎಲ್ಲ ಖರ್ಚನ್ನೂ ಹಿಡಿದರು. ಪಾಪ ಅವರಾದರೂ ಎಷ್ಟೆಂದು ಕೊಟ್ಟಾರು? ನನಗೇ ನಾಚಿಕೆಯಾಯಿತು. ನಾನು ಇನ್ನು ಎಲ್ಲಿಯಾದರೂ ಹೊಟ್ಟೆ ಹೊರೆದುಕೊಳ್ಳಬಹುದೆಂದು ಹೇಳಿ ಒಂದು ದಿನ ಹೇಳದೇ ಕೇಳದೆ ಮಾಯವಾದೆನು. ಎಷ್ಟೋ ದಿನಗಳ ತನಕ ಇವರು ನನ್ನನ್ನು ಹುಡುಕಿಯೇ ಹುಡುಕುತ್ತಿದ್ದರು. ಕಡೆಗೆ ಬೇಸತ್ತು ಬಿಟ್ಟುಬಿಟ್ಟರು. ನಾನು ಬೊಂಬಾಯಿಗೆ ಹೋಗಿ ಮೂರು ನಾಲ್ಕು ದಿವಸಗಳ ವರೆಗೆ ಎಲ್ಲ ಆಫೀಸುಗಳಿಗೆ ಹರಕೆ ಹಾಕಿ ಬಂದೆನು. ಎಲ್ಲಿಯೂ ನೌಕರಿ ಸಿಗದೆ ಇನ್ನು ಸೈನ್ಯಕ್ಕೆ ಭರತಿಯಾಗಬೇಕೆನ್ನುವಷ್ಟರಲ್ಲಿ ನನ್ನ ಸುದೈವದಿಂದ ಒಂದು ಫ್ಯಾಕ್ಟರಿಯಲ್ಲಿ ಒಂದು ನೌಕರಿ ದೊರೆಯಿತು. ಅಲ್ಲಿಯ ವೇತನವೂ ಚನ್ನಾಗಿತ್ತು. ನಂತರ ಇವರ ಕೂಡ ಪತ್ರವ್ಯವಹಾರ ನಡೆಸಿದೆನು. ಅಲ್ಲಿ ಒಂದೆರಡು ವರ್ಷಗಳತನಕ ನೌಕರಿ ಮಾಡಿದ ಮೇಲೆ ಅವರು ಇದೇ ಊರಿಗೆ, ತಮ್ಮ ಮತ್ತೊಂದು ಬ್ರ್ಯಾಂಚಿಗೆ, ನನ್ನನ್ನು ವರ್ಗಾಯಿಸಿದರು. ಅಂದೇ ಇಲ್ಲಿ ಬಂದು ಇವರ ಮುಖ ಕಂಡದ್ದು." ಎಂದು ತನ್ನದೆಲ್ಲವನ್ನೂ ಹೇಳಿ ಶೂನ್ಯದೃಷ್ಟಿಯಿಂದ ಎತ್ತಲೋ ನೋಡುತ್ತ ಕುಳಿತುಕೊಂಡನು.

"ಮಿಂಚಿಹೋದ ಮಾತಿಗೆ ಚಿಂತಿಸಿ ಫಲವಿಲ್ಲ. ಶ್ಯಾಮ, ನಾವಿಬ್ಬರೂ ನೊಂದ ಹೃದಯದವರು. ನಾವಿಬ್ಬರೂ ಇಂದಿಗೆ ನಿರ್ಗತಿಕರು. ಆದರೆ, ಶ್ಯಾಮ, ಇಂದಿನಿಂದ ನಾನು ನಿನಗೆ ಗತಿ, ನೀನು ನನಗೆ ಗತಿ. ನಾವಿಬ್ಬರೂ ಕೂಡಿ ಒಂದು ಆದರ್ಶ ಸಂಸಾರವನ್ನು ಮಾಡಿ ನಮ್ಮ ನಮ್ಮ ತಾಯಿ ತಂದೆಗಳ ಆತ್ಮಕ್ಕೆ ಶಾಂತಿಯನ್ನೀಯೋಣ" ವೆಂದು ಅವನ ಬಲಗೈಯನ್ನು ತನ್ನ ಬಲಗೈಯೊಳಗೆ ಇರಿಸಿದ್ದಳು. ಆಗ ಇಬ್ಬರ ದೃಷ್ಟಿಗಳ ಮಿಲನವಾಯಿತು. ಇಬ್ಬರ ಮುಖದ ಮೇಲೆ ಮುಗುಳ್ನಗೆಯೊಂದು ಮಿಂಚಿ ಹೋಯಿತು! ಇಬ್ಬರೂ ತಮ್ಮ ತಮ್ಮ ಹಿಂದಿನಿಂದ ಇಂದಿನವರೆಗಿನ ದುರ್ದೈವದ ಚಿತ್ರವನ್ನು ಮನಸ್ಸಿನಲ್ಲಿ ಬರೆದುಕೊಂಡು "ಎಲ್ಲವೂ ದೈವವೇ" ಎಂದು ಇಬ್ಬರೂ ಏಕಕಾಲಕ್ಕೆ ಉಸುರಿದರು.

— ಸೌ. ಜಾನಕೀಬಾಯಿ ರೊಟ್ಟಿ

## ಲಂಡನ್ನಿನಲ್ಲಿ ಭಾರತೀಯ ಕಲಾಪ್ರದರ್ಶನ

ಲಂಡನ್ನಿನ ಭಾರತ ಭವನದಲ್ಲಿ ಭಾರತೀಯ ಕಲಾಪ್ರದರ್ಶನ ನಡೆದಾಗ ಐದು ಜನ ಕಲಾವಿದರು ತಂತಮ್ಮ ಕಲಾಕೃತಿಗಳನ್ನು ಪ್ರದರ್ಶಿಸಿ ಮಿಕ್ಕವರಿಗಿಂತ ಹೆಚ್ಚಿನ ಪ್ರಶಂಸೆ ಪಡೆದರು. ಭವಾನೀಚರಣಗ್ಯು, ಏ. ಆರ್. ಡಿ. ಎಸ್., ಎಫ್. ಆರ್. ಎಸ್. ಎ., ಚಿಂತಾಮಣಿಕರ್, ಏ. ಆರ್. ಬಿ. ಎಸ್., ಕೆ. ಕೃಷ್ಣ ಹೆಬ್ಬಾರ್, ಮಾರ್ಗರೆಟ್ ಮಿಲ್‌ವರ್ಡ್ ಮತ್ತು ಅಲ್‌ಫ್ರೆಡ್ ಥಾಮಸ್ ಎಂಬವರೇ ಆ ಐವರು.

ಮೊದಲನೆಯ ಕಲಾವಿದರಾದ ಗ್ಯು ಅವರಿಗೆ ಜಲವರ್ಣ ಮತ್ತು ಬಣ್ಣದ ಸೀಮೆಯ ಸುಣ್ಣಗಳು ಮಾಧ್ಯಮಗಳು. ಭೂಪ್ರದೇಶಗಳು "ಕಡೆಯ ಹೊಳಪು" ಎಂಬ ಸೂರ್ಯಾಸ್ತ ಕಾಲದ ಮುಗಿಲುಗಳು; "ರಾಜಪುತ್ರನ ಕೋಟೆ", ಸೂರ್ಯ ಪ್ರಕಾಶಮಯವಾದ "ದಾಲ್ ಲೇಕ್" ಎಂಬ ಚಿತ್ರಗಳನ್ನು ಅವರು ಜಲವರ್ಣ (water colour) ದಿಂದಲೂ "ವಸಂತ"ದ ಮರಗಳನ್ನು ಸೀಮೆಯ ಸುಣ್ಣದಿಂದಲೂ ಬಹಳ ಚೆನ್ನಾಗಿ ಚಿತ್ರಿಸಿದ್ದರು.

ಚಿಂತಾಮಣಿಕರರು ಶಿಲ್ಪಿಗಳಂತೆ. ಆದರೂ ಅವರು ತೈಲಚಿತ್ರಗಳನ್ನೂ ಮಧುಮಿಶ್ರಿತ ಜಲವರ್ಣ ಚಿತ್ರಗಳನ್ನೂ ಕೇವಲ ಜಲವರ್ಣ ಚಿತ್ರಗಳನ್ನೂ ಪ್ರದರ್ಶಿಸಿದ್ದರು. ಪ್ರತಿಯೊಂದೂ ಚೆನ್ನಾಗಿದ್ದವು. ಅವುಗಳಲ್ಲಿ ಸ್ಪೇನಿನ ಹುಡುಗಿ, ಮೂವರು ಹೆಂಗಸರು ಎಂಬವು ಮುಖ್ಯ. ಶಿಲ್ಪಕ್ಕೆ ಗಾರೆ, ಕಂಚು, ಅಮೃತಶಿಲೆಗಳೇ ಮಾಧ್ಯಮಗಳು. ಅವುಗಳಿಂದ ಮಾಡಿದ ವಿಗ್ರಹಗಳಲ್ಲಿ ಅಪ್ಸರೆ, ತಾಯಿ ಮಗು ಎಂಬವು ಮನೋಹರವಾಗಿದ್ದವು.

ಕೃಷ್ಣ ಹೆಬ್ಬಾರರು ತೈಲಚಿತ್ರ, ಜಲವರ್ಣ ಚಿತ್ರ, ಸೀಮೆಯ ಸುಣ್ಣದ ಚಿತ್ರ, ಮಿಶ್ರಚಿತ್ರ ಮಸಿ ಚಿತ್ರಗಳನ್ನು ಪ್ರದರ್ಶಿಸಿದ್ದರು. ಅವರ 'ದನಕರುಗಳ ಅಂಗಡಿ' ಎಂಬುದು ರಜಪೂತರ ಕಾಲದ ವರ್ಣಚಿತ್ರವನ್ನು ಹೋಲುತ್ತದೆ. 'ಪೂರಂ' ಎಂಬ ತೈಲ ಚಿತ್ರದಲ್ಲಿ ಅವರು ಹೊಳೆವ ಆನೆಗಳು, ತುತ್ತೂರಿ ಊದುವವರು ಮತ್ತು ನರ್ತಕರನ್ನು ಬಿಡಿಸಿದ್ದು ಬಹಳ ಸುಂದರವಾಗಿದೆ. ಮಸಿಯಲ್ಲಿ ಬರೆದ ಅವರ "ವೆಂಕಟಾಚಲಂ" "ಜಾತ್ರೆ ಮತ್ತು ವಿನೋದ" ಎಂಬ ಚಿತ್ರಗಳು ಅತ್ಯಂತ ರಮಣೀಯವಾಗಿದ್ದವು.

ಮಾರ್ಗರೆಟ್ ಮಿಲ್ವರ್ಡಳು ಶಿಲ್ಪಿ. ಅವಳ ಚಿತ್ರಗಳಲ್ಲಿ ಬಹುಸಂಖ್ಯ ಅರ್ಧ ಮೂರ್ತಿಗಳು. ಅವುಗಳಲ್ಲಿ ಸರ್ ಜಗದೀಶ್ ಚಂದ್ರ ಬೋಸ್, ಸರ್ ಎಸ್. ರಾಧಾಕೃಷ್ಣನ್ ಇವರ ಅರ್ಧ ಮೂರ್ತಿಗಳು ಸುಂದರವಾಗಿದ್ದವು. ಅವುಗಳ ಜೊತೆಗೆ ಸಿಂಹಳದ ಸಂಗೀತಗಾರ, 'ಕ್ಯಾಂಬೋಡಿಯದ ನೇಯ್ಗೆಕಾರ' 'ಗೋಂಡರ ಹುಡುಗಿ' ಎಂಬ ಚಿತ್ರಗಳೂ ಬಹಳ ಆಕರ್ಷಕವಾಗಿದ್ದವು.

ಅಲ್‌ಫ್ರೆಡ್ ಥಾಮಸ್ಸನು ಇಂಗ್ಲಂಡಿನಲ್ಲೂ ಭಾರತದಲ್ಲೂ ಹೆಸರಾದ ಶಿಲ್ಪಿ. ಈತನ ಭೂಪ್ರದೇಶ, ಗೋಡೆಗಳು, ಸಮುದ್ರತೀರಗಳು ಬಹಳ ಸುಂದರವಾಗಿದ್ದವು. ಅವುಗಳನ್ನು ಎಲ್ಲರೂ ಮೆಚ್ಚಿದರು. ಜಲವರ್ಣ ಚಿತ್ರಗಳಲ್ಲಿ ಧಾರ್ಮಿಕ ಚಿತ್ರಗಳನ್ನು ಬಿಡಿಸಿದ್ದೇ ಹೆಚ್ಚು. ಕ್ರೈಸ್ತನಿಗೆ ಭಾರತೀಯ ಸಾಧುವಿನ ಕಳೆ ಕೊಟ್ಟಿದ್ದು ಅದ್ಭುತರಮ್ಯವಾಗಿಯೂ ತನ್ನ ತಾಯಿಯ ತೈಲಚಿತ್ರ ಬರೆದದ್ದು ಅತ್ಯಂತ ಸರಳ ಸುಂದರವಾಗಿಯೂ ಇದ್ದುವು.

— ರಸ ವಿದ್ಯಾಧರ

## ಮುಖಪತ್ರದಲ್ಲಿ

ಮುಂಬಯಿಯ ವಿಶ್ವವಿದ್ಯಾಲಯ ಕಟ್ಟಡದ ಬಳಿಗೆ ಹೋದರೆ ನೀವು ಭವ್ಯಾಕೃತಿಯ ಗಡಿಯಾರದ ಗೋಪುರವೊಂದು ಅದಕ್ಕೆ ತಾಗಿ ಕೊಂಡಿರುವದನ್ನು ಕಾಣುವಿರಿ. ಇದೇ ರಾಜಾಬಾಯಿ ಗೋಪುರ. ಮುಂಬಯಿ ಯಲ್ಲಿ ಇದಕ್ಕಿಂತ ಎತ್ತರವಾದ ಕಟ್ಟಡ ಬೇರೊಂದಿಲ್ಲ. ಲಂಡನ್ನಿನಲ್ಲಿ "ಬಿಗ್‌ಬೆನ್" ಗಡಿಯಾರ ಗೋಪುರ ವಿದ್ದಂತೆ ಇದು ಮುಂಬಯಿ ವಾಸಿಗಳಿಗೆ ಕಾಲರಾಯನ ಹೆಜ್ಜೆಗಳ ನೆನಪು ಮಾಡಿಕೊಡುತ್ತದೆ. ಆದರೆ ಈ ಗೋಪುರ ಶಿಖರ ಈಚೆಗೆ ಕಾಲರಾಯನ ಇನ್ನೊಂದು ವಿಲಾಸವನ್ನೂ ತೋರಿಸಿತು. ಮೊನ್ನಿನ ಎಸ್. ಎಸ್. ಸಿ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದದೆ ನಿರಾಶನಾದ ವಿದ್ಯಾರ್ಥಿಯೊಬ್ಬನು ಈ ಗೋಪುರದ ಶಿಖರವನ್ನೇರಿ ನಶ್ವರ ಜಗತ್ತಿನ ಆಚಾರ ವ್ಯವಹಾರಗಳ ಕೋಟಲೆಯಿಂದ ಮುಕ್ತಿ ಹೊಂದಲು ಕಣ್ಣು ಮುಚ್ಚಿ ಕೆಳಗೆ ಧುಮುಕಿದನು. ಪರೀಕ್ಷಾಮಯ ಸಂಸಾರದ ಬಂಧನದಿಂದ ಪಾರಾಗಲು ಈ ಗೋಪುರ ಅವನಿಗೆ ನೆರವಾಯಿತು!

ಚಿತ್ರ: ಶ್ರೀ ಕೆ. ಜಿ. ಹೆಗಡೆ

*


## ಕರ್ಮವೀರ

**ಪ್ರತಿ ಸೋಮವಾರ ಹುಬ್ಬಳ್ಳಿಯಿಂದ ಹೊರಡುವ ವಾರಪತ್ರಿಕೆ**

ಸಂಸ್ಥಾಪಕರು :

**ಶ್ರೀ. ರಂ. ರಾ. ದಿವಾಕರ**

ಸಂಪಾದಕರು :

**ಶ್ರೀ. ಹ. ರಾ. ಪುರೋಹಿತ**

### ಹೊಸ ವರ್ಗಣಿ ವಿವರಗಳು :

| | |
|---|---|
| ೧ ವರ್ಷಕ್ಕೆ | ರೂ. ೬—೧೨—೦ |
| ೬ ತಿಂಗಳಿಗೆ | ರೂ. ೩—೮—೦ |
| ೩ ,, | ರೂ. ೨—೦—೦ |

ಬಿಡಿಸಂಚಿಕೆ : ೨ ಆಣೆ

ವ್ಹಿ. ಪಿ. ದಿಂದ ಕಳಿಸಿದರೆ ೦—೬—೦ ಹೆಚ್ಚು ಬೀಳುವದು.

**ಸೂಚನೆ :** ಈ ವರೆಗೆ ವರ್ಷಕ್ಕೆ ೪೮ ವಾರ ರಜೆ ತೆಗೆದುಕೊಳ್ಳುವ ಪರಿಪಾಠವಿತ್ತು. ಓದುಗರಿಗೆ ಇದರಿಂದ ತೊಂದರೆಯಾಗುವದನ್ನರಿತು ಇನ್ನು ಮುಂದೆ ರಜೆಗಳನ್ನು ರದ್ದುಗೊಳಿಸಿ ವರ್ಷದಲ್ಲಿ ೫೨ ಸಂಚಿಕೆಗಳನ್ನು ತೆಗೆಯಲಾಗುವದು. ವಿಶೇಷ ಸಂಚಿಕೆಗಳನ್ನು ಹೊರಡಿಸಿದರೆ ಅದರ ಬಗ್ಗೆ ಪ್ರತ್ಯೇಕ ಬೆಲೆಯನ್ನು ಕೊಡಬೇಕಾಗುವದು.

**ಚಂದಾದಾರರು :** ತಮ್ಮ ವರ್ಗಣಿ, ಸಂಚಿಕೆಗಳ ತಲುಪುವಿಕೆಯ ಸಂಬಂಧದ ದೂರು ಮೊದಲಾದವುಗಳ ಬಗ್ಗೆ ಪತ್ರವ್ಯವಹಾರವನ್ನು ಮಾಡುವಾಗ ವಿಳಾಸದ ಚೀಟಿಯ ಮೇಲಿರುವ ಚಂದಾ ನಂಬರುಗಳನ್ನು ಉಲ್ಲೇಖಿಸಬೇಕು. ಇಲ್ಲದಿದ್ದರೆ ಸಾವಿರಗಟ್ಟಳೆ ಚಂದಾದಾರರಲ್ಲಿ ನಿಮ್ಮ ಹೆಸರನ್ನು ಕಂಡು ಹಿಡಿಯುವದು ಸಾಧ್ಯವಾಗದು.

**ಲೇಖಕರು:** "ಕರ್ಮವೀರ" ದಲ್ಲಿ ಪ್ರಕಟನೆಗಾಗಿ ಕಳಿಸುವ ಲೇಖ, ಕತೆ, ಕವಿತೆ ಮೊದಲಾದವುಗಳು ಅಸ್ವೀಕೃತವಾದಲ್ಲಿ ತಿರುಗಿ ಪಡೆಯಲಪೇಕ್ಷಿಸುತ್ತಿದ್ದರೆ ಲೇಖದ ಸಂಗಡಲೇ ಅವಶ್ಯವಿದ್ದಷ್ಟು ಅಂಚೆ ತಿಕೀಟುಗಳನ್ನು ಕಳಿಸಿರಬೇಕು. ಹಾಗೆ ಮಾಡದೆ ಮುಂದೆ ಆ ಲೇಖಗಳ ಬಗ್ಗೆ ಪತ್ರವ್ಯವಹಾರ ಮಾಡಿದರೆ ಅಥವಾ ತಿರುಗಿ ಕಳಿಸಬೇಕೆಂದರೆ ಅದು ಸಾಧ್ಯವಾಗದು. ಸ್ವೀಕೃತವಾದ ಕತೆಗಳಿಗೂ ಪುರಸ್ಕಾರದ, ಅಂದರೆ "ಕರ್ಮವೀರ"ದ ಎರಡು ಕಾಲಂ ಮೀರಿದ ಲೇಖಗಳಿಗೂ ನಿರ್ದಿಷ್ಟ ಪ್ರತಿಫಲ ಕೊಡಲಾಗುವದು.

— ವ್ಯವಸ್ಥಾಪಕ,
"ಕರ್ಮವೀರ" ಹುಬ್ಬಳ್ಳಿ.



ಸಂಪುಟ ೨೦ | **ಕರ್ಮವೀರ** | ಸೋಮವಾರ
ಸಂಚಿಕೆ ೧೭ | | ಶ್ರಾವಣ ಶು. ೧೩

ತಾರೀಕು ೮—೮—೧೯೪೯


# ಲಿಯಾಖತರ ಘೂತ್ಕಾರಗಳು

ಪಾಕಿಸ್ತಾನದ ಮುಸಲ್ಮಾನರಲ್ಲಿ, ಆ ಸರಕಾರದ ಮುಖ್ಯ ಮಂತ್ರಿಗಳಾಗಿರುವ ಲಿಯಾಖತ ಅಲ್ಲೀಖಾನರು ಒಳ್ಳೇ ಸಮಂಜಸ ವಿಚಾರದವರು, ಪರಿಸ್ಥಿತಿಯನ್ನು ಚೆನ್ನಾಗಿ ತಿಳಿದುಕೊಂಡು ಮಾತಾಡುವವರು, ಹಿಂದೂ ಮುಸಲ್ಮಾನರಲ್ಲಿ ಸ್ನೇಹ ಸಂಬಂಧ ಬೆಳೆಯಬೇಕೆಂದು ಹಂಬಲಿಸುವವರು ಎಂದು ಅನೇಕರು ಭಾವಿಸಿದ್ದರು. ಆದರೆ ಇತ್ತೀಚೆ ಅವರು ವಹಿಸುತ್ತಿರುವ ಧೋರಣವು ತೀರ ಘಾತಕವಾಗಿದೆ. ಹೇಗಾದರೂ ಮಾಡಿ ಹಿಂದುಸ್ತಾನದಲ್ಲಿಯ ಮುಸಲ್ಮಾನರನ್ನು ಅವರ ಸರಕಾರದ ವಿರುದ್ಧ ಬಹುಸಂಖ್ಯ ಹಿಂದುಗಳ ವಿರುದ್ಧ ಎಬ್ಬಿಸಿ ಕೂಡ್ರಿಸಿ ದೇಶದಲ್ಲಿ ಅಶಾಂತಿ, ಅಸಮಾಧಾನಗಳನ್ನು ಹಬ್ಬಿಸಬೇಕೆಂದು ಅವರು ಬಗೆದಿರುವರೆಂದು ತೋರುತ್ತದೆ. ಮೊನ್ನೆ ಈದ ದಿನಾಚರಣೆಯ ನಿಮಿತ್ತ ಕರಾಚಿಯಲ್ಲಿ ಭಾಷಣ ಮಾಡುವಾಗ ಲಿಯಾಖತರು ಇಂಥವೇ ಘಾತಕ ಶಬ್ದಗಳನ್ನು ಉಚ್ಚರಿಸಿ ಹಿಂದುಸ್ತಾನದಲ್ಲಿಯ ಮುಸಲ್ಮಾನರ ಟೀಕೆಗೆ ಗುರಿಯಾಗಿರುವರು. 'ಹಿಂದುಸ್ತಾನದಲ್ಲಿಯ ಮೂರೂವರೆ ಕೋಟಿ ಮುಸಲ್ಮಾನರನ್ನು ಮರೆಯಬೇಡಿರಿ, ನಮ್ಮ ರಕ್ತ ಸಂಬಂಧಿಗಳಾದ ಅವರಿಂದು ಗುಲಾಮರಾಗಿದ್ದು ಸ್ವತಂತ್ರ ನಾಗರಿಕರಂತೆ ಇಂದು ಈ ಹಬ್ಬವನ್ನು ಆಚರಿಸುತ್ತಿಲ್ಲ ಎಂಬದನ್ನು ಮರೆಯಬೇಡಿರಿ' ಎಂದು ಪಾಕಿಸ್ತಾನದ ಮುಖ್ಯ ಮಂತ್ರಿ ಹೇಳಿದರು. ಈದದಂಥ ಪವಿತ್ರ ದಿನದಲ್ಲಿ ಹಿಂದೂ ಮುಸಲ್ಮಾನರಲ್ಲಿ ದ್ವೇಷಭಾವನೆಯನ್ನು ಹಬ್ಬಿಸುವಂಥ ಈ ಘೂತ್ಕಾರಗಳು ಮುಖ್ಯಮಂತ್ರಿಗಳಂಥ ಹೊಣೆಗಾರ ಜನರ ಬಾಯೊಳಗಿಂದ ಬರುವುದೇಕೆಂದರೆ ಹಿಂದುಸ್ತಾನದ ಬಗ್ಗೆ ಪಾಕಿಸ್ತಾನ ಸರಕಾರದ ಧೋರಣ ವೇನಿದೆಂಬದು ಸ್ಪಷ್ಟ ತಿಳಿಯುತ್ತದೆ. ಹೀಗೆ ಹೊಣೆಗೇಡಿ ಮಾತುಗಳನ್ನಾಡುವ ಮೊದಲು ಮುಖ್ಯ ಮಂತ್ರಿಗಳು ಹಿಂದುಸ್ತಾನದಲ್ಲಿಯ ಮುಸಲ್ಮಾನರು ತಮ್ಮ ಹಬ್ಬವನ್ನು ಎಂತು ಆಚರಿಸಿದರೆಂಬುದನ್ನು ತಿಳಿದುಕೊಂಡಿದ್ದರೆ, ತಮ್ಮ ಅಸತ್ಯ ಪ್ರಲಾಪಗಳು ಎಷ್ಟೊಂದು ಹುರುಳಿಲ್ಲದವೆಂಬುದು ಗೊತ್ತಾಗುತ್ತಿದ್ದಿತು.

ರಮಜಾನ ಈದವು ಇಡೀ ಹಿಂದುಸ್ತಾನದಲ್ಲಿ ಅತ್ಯಂತ ವೈಭವದಿಂದ ಆಚರಿಸಲ್ಪಟ್ಟಿತೆಂಬ ವರದಿಗಳು ಈಗಾಗಲೆ ಪ್ರಸಿದ್ಧವಾಗಿವೆ. ಮುಸಲ್ಮಾನರು ಬಹುಸಂಖ್ಯ ಮುಸಲ್ಮಾನೇತರರ ಆಳಿಕೆಯಲ್ಲಿ ಈ ಹಬ್ಬವನ್ನಾಚರಿಸುತ್ತಿರುವರೆಂಬ ಕಲ್ಪನೆಯು ಕೂಡ ಹಿಂದೀ ಮುಸಲ್ಮಾನರಿಗೆ ಬರಲಿಲ್ಲ. ಅವರು ಸ್ವತಂತ್ರ ನಾಗರಿಕರಂತೆಯೆ ಈ ಹಬ್ಬವನ್ನು ಆಚರಿಸಿದರು. ಹಿಂದುಸ್ತಾನದಲ್ಲಿಯ ಹೊಣೆಗಾರ ಮುಸಲ್ಮಾನರು ಲಿಯಾಖತರ ಈ ಘೂತ್ಕಾರಗಳನ್ನು ಸಕಾಲದಲ್ಲಿಯೆ ಖಂಡಿಸಿ ಯೋಗ್ಯ ಉತ್ತರ ಕೊಟ್ಟಿರುವರು. ದಿಲ್ಲಿಯಲ್ಲಿ ಜುಮ್ಮಾ ಮಸೀದೆಯಲ್ಲಿ ಒಂದು ಲಕ್ಷ ಜನ ಮುಸಲ್ಮಾನರು ಈದ ಪ್ರಾರ್ಥನೆಗಾಗಿ ಸಮ್ಮಿಲಿತರಾಗಿದ್ದರು. ಮೌಲಾನಾ ಅಬುಲ್ ಕಲಂ ಆಝಾದ, ಅಫಗಾಣಿಸ್ತಾನದ ರಾಯಭಾರಿಗಳಾದ ಸರದಾರ ನಾಜೀಬುಲ್ಲಾ ಖಾನ ಪಾಕಿಸ್ತಾನದ ಹಾಯಕಮೀಶನರರಾದ ಮಹಮ್ಮದ ಇಸ್ಮಾಯಿಲ್ ಮೊದಲಾದವರು ಉಪಸ್ಥಿತರಾಗಿದ್ದರು. ಲಿಯಾಖತರು ತಮ್ಮ ಪ್ರತಿನಿಧಿಗಳ ಕಡೆಯಿಂದ ಈ ದಿನಾಚರಣೆಯ ಬಗ್ಗೆ ವರದಿಯನ್ನು ತರಿಸಿಕೊಂಡ ಬಳಿಕವಾದರೂ ತಮ್ಮ ಮುಕ್ತಾಫಲಗಳನ್ನು ಉದುರಿಸಿದ್ದರೆ ಅವಕ್ಕೇನಾದರೂ ಬೆಲೆಯಿರುತ್ತಿದ್ದಿತು. ಜುಮ್ಮಾ ಮಸೀದೆಯಲ್ಲಿಯ ಪ್ರಾರ್ಥನೆಯ ಅನಂತರ ಸರಕಾರೀ ಭವನದಲ್ಲಿ ನೆರೆದ ಸಮಾರಂಭದಲ್ಲಿ ಗವರ್ನರ ಜನರಲ್‌ರು, ಹಿಂದುಸ್ತಾನದ ಮುಖ್ಯಮಂತ್ರಿಗಳು ಮೊದಲಾದವರೆಲ್ಲ ಉಪಸ್ಥಿತರಾಗಿದ್ದರು. ರಮಜಾನ ಹಬ್ಬದ ಈ ಶುಭ ಸಮಯದಲ್ಲಿ ಹಿಂದುಸ್ತಾನದಲ್ಲಿಯ ಎಲ್ಲ ಜಾತಿ ಪಂಥದವರು ಸದ್ಭಾವನೆಗಳಿಂದೊಡಗೂಡಲಿ, ಪರಸ್ಪರರಲ್ಲಿ ಬಂಧು ಭಾವವು ಬೆಳೆಯಲಿ. ಯಾವದೇ ಜಾತಿಯವರು ಹಬ್ಬವನ್ನಾಚರಿಸುತ್ತಿದ್ದರೂ ಈ ಧ್ಯೇಯ ಸಾಧನೆಯಲ್ಲಿ ಅದರ ಪ್ರತಿಫಲ ದೊರೆಯಲಿ. ಎಂದು ಗವರ್ನರ ಜನರಲ್‌ರು ಆ ಸಮಯದಲ್ಲಿ ಹೇಳಿದರು. ಶ್ರೀ ರಾಜಗೋಪಾಲಾಚಾರ್ಯರ ಈ ಸದ್ಭಾವನೆಯ ನುಡಿಗಳೆತ್ತ ಪಾಕಿಸ್ತಾನದ ಮುಖ್ಯ ಮಂತ್ರಿಗಳಾದ ಲಿಯಾಖತರ ಘೂತ್ಕಾರದ ನುಡಿಗಳೆತ್ತ! ಹಿಂದುಸ್ತಾನದಲ್ಲಿಯ ಮುಸಲ್ಮಾನರು ಲಿಯಾಖತರ ಈ ಕಹಿನುಡಿಗಳಿಗೆ ಈಗಾಗಲೆ ಉತ್ತರಕೊಟ್ಟಿರುವರು ಅ. ಭಾ. ಮೊಮಿನ್ ಪರಿಷತ್ತಿನ ಅಧ್ಯಕ್ಷರಾಗಿರುವ ಅಬ್ದುಲ್ ಕಯಾಮ ಅನ್ಸಾರಿ, ಸರ್ ಮಿರ್ಜಾ ಇಸ್ಮಾಯಿಲ್, ದಿಲ್ಲಿಯ ಧುರೀಣರಾದ ಮುಸ್ತಕ ಅಹಮ್ಮದ ಮೊದಲಾದವರು ಲಿಯಾಖತರ ಈ ಹೇಳಿಕೆಯನ್ನು ಖಂಡಿಸಿದ್ದಾರೆ. ಪಾಕಿಸ್ತಾನದಲ್ಲಿಯ ಮುಸಲ್ಮಾನರ ಭವಿಷ್ಯತ್ತಿಗಿಂತ ಹಿಂದುಸ್ತಾನದಲ್ಲಿಯ ಮುಸಲ್ಮಾನರ ಭವಿಷ್ಯತ್ತು ಅತ್ಯಂತ ಉಜ್ವಲವಾಗಿದೆ ಎಂಬುದನ್ನು ನೆನೆದುಕೊಂಡು ಹಿಂದೀ ಮುಸಲ್ಮಾನರನ್ನೆಲ್ಲ ಮರೆತು ಬಿಡಿರಿ ಎಂದು ಆದೆಷ್ಟು ಸಲ ಪಾಕಿಸ್ತಾನದ ಧುರೀಣರ ಗಮನಕ್ಕೆ ತರತಕ್ಕದ್ದು, ಎಂದು ಮುಸ್ತಕ ಅಹಮ್ಮದರು ಸ್ಪಷ್ಟ ಶಬ್ದಗಳಲ್ಲಿ ಉತ್ತರಕೊಟ್ಟಿರುವರು. ಹಿಂದೀ ಮುಸಲ್ಮಾನರು ಈ ರೀತಿಯಾಗಿ ತಮ್ಮ ಹೇಳಿಕೆಯನ್ನು ಖಂಡಿಸಿರುವದನ್ನು ನೆನೆದಾದರೂ ಲಿಯಾಖತರು ಬಾಯಿಮುಚ್ಚಿಕೊಂಡು ಕೂಡ್ರುವದು ಉಚಿತವಾಗಿದೆ.

ಹಿಂದ—ಪಾಕಗಳಲ್ಲಿಯ ಸ್ನೇಹ ಭಾವನೆಗೆ ಭಂಗ ತರದಂತೆ ಎಲ್ಲರೂ ಆಚರಿಸತಕ್ಕದ್ದಿರುವದು ಎರಡೂ ಸರಕಾರಗಳಲ್ಲಿ ಆಗಾಗ ಒಡಂಬಡಿಕೆಗಳಾದುದುಂಟು. ಆದರೆ ಪಾಕಿಸ್ತಾನದ ಮುಖ್ಯಮಂತ್ರಿಗಳೆ ಸ್ನೇಹ ಭಾವನೆಗಳಿಗೆ ಆೇಪ ಬರುವಂಥ ಮಾತುಗಳನ್ನು ಆಡುವದೇಕೆಂದರೆ ಆ ಒಡಂಬಡಿಕೆಗಳ ಅಪಹಾಸ ಮಾಡಿದಂತೆಯೆ ಸೈ. ಸ್ವಾರ್ಥ, ಮಹತ್ವಾಕಾಂಕ್ಷೆಗೆ ಬಲಿಬಿದ್ದ ಲಿಯಾಖತರು ತಮ್ಮ ರಕ್ತಸಂಬಂಧಿಗಳೆ ಆದ ಅಫಗಾಣಿಸ್ತಾನದ ಮುಸಲ್ಮಾನರ ಮೇಲೆ ಬಾಂಬೆಸೆಯಗೊಡಿಸಿ, ಆ ಬಗ್ಗೆ ಸ್ವಲ್ಪವೂ ಪಶ್ಚಾತ್ತಾಪ ವ್ಯಕ್ತಪಡಿಸದೆ ತಮ್ಮ ಮೇಲಿನ ಹೊಣೆಯನ್ನು ಹಾರಿಸಿಕೊಳ್ಳಲು ಹವಣಿಸಿದ್ದು ಅರಿಯದ ಮಾತಲ್ಲ. ಅನಂತರ ವಿಚಾರಣಾ ಮಂಡಲದ ಘೋಷಣೆ ಮಾಡಿ ಪರಿಹಾರ ಕೊಡಲು ಅವರು ಮುಂದಾದುದೂ ಉಂಟು. ಇದನ್ನೆಲ್ಲ ನೋಡಿದರೆ ಹೊರಗಿನ ಜಾತಿಬಾಂಧವರ ಬಗ್ಗೆ ಲಿಯಾಖತರಲ್ಲಿ ಅದೆಷ್ಟು ಸ್ನೇಹ ಭಾವವಿದೆಂಬುದು ಸ್ಪಷ್ಟವಾಗುವದು. ಈ ಪರಿಸ್ಥಿತಿಯಲ್ಲಿ ಲಿಯಾಖತರ ಈ ಅಪಪ್ರಚಾರದಿಂದ ಹಿಂದುಸ್ತಾನದಲ್ಲಿಯ ಯಾವ ಮುಸಲ್ಮಾನರೂ ಮರಳು ಹೋಗಲಾರರು. ತದ್ವಿರುದ್ಧವಾಗಿ ಅವರ ಬಗ್ಗೆ ಆದರ ಭಾವ ಕಡಮೆಯಾಗುವದು. ಲಿಯಾಖತರು ಪರಿಸ್ಥಿತಿಯನ್ನು ತಿಳಿದುಕೊಂಡು ಇನ್ನಾದರೂ ಹಿಂದುಸ್ತಾನದಲ್ಲಿಯ ಮುಸಲ್ಮಾನರ ಹಿತ ಸಂಬಂಧಗಳ ರಕ್ಷಣೆಯ ಸೋಗು ಹಾಕುವದನ್ನು ಬಿಡುವದು ಮತ್ತು ಇಂಥ ಘೂತ್ಕಾರಗಳನ್ನಾಡದಿರುವದು ಅತ್ಯವಶ್ಯವಾಗಿದೆ.

## ಕಾಂಗ್ರೆಸ್ ಕಾರ್ಯ ಸಮಿತಿ

ಕಾಂಗ್ರೆಸ್ ಕಾರ್ಯ ಸಮಿತಿಯವರು ಪಶ್ಚಿಮ ಬಂಗಾಲದ ಸಂಬಂಧದಲ್ಲಿ ಕೈಕೊಂಡಿದ ನಿರ್ಣಯವನ್ನು ಆ ಪ್ರಾಂತದಲ್ಲಿ ಬಹುಶಃ ಎಲ್ಲ ಪಕ್ಷದವರು ಪತ್ರಿಕೆಗಳು ಸ್ವಾಗತಿಸುವವೆಂಬ ಆಶೆಯಿದೆ. ಆ ಪ್ರಾಂತದ ಪರಿಸ್ಥಿತಿಯಲ್ಲಿ ಇರುವ ಅರಾಜಕತೆ, ಭ್ರಷ್ಟಾಚಾರ ... ಮತ್ತು ಸಂಕಷ್ಟಗಳಿಗೆಲ್ಲ ಚಿಕಿತ್ಸೆಯ ಉಪಾಯವೆಂದು ಹೇಳಲಾಗುತ್ತದೆ. ಹದಗೆಟ್ಟ ಬಂಗಾಲ ಪರಿಸ್ಥಿತಿಯನ್ನು ಸುಧಾರಿಸಬೇಕಾದರೆ ಆಡಳಿತೆಯಲ್ಲಿ ಬದಲಾವಣೆಯಾಗುವದು, ಅಧಿಕಾರದಲ್ಲಿದ್ದ ವ್ಯಕ್ತಿಗಳನ್ನು ಬದಲಿಸುವದು ಅವಶ್ಯವೆಂದು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಇನ್ನಾರು ತಿಂಗಳಲ್ಲಿ ಸಾರ್ವತ್ರಿಕ ಚುನಾವಣೆಯಾದರೂ ... ನಡೆಯುತ್ತಿದ್ದರೂ ಮುಸಲ್ಮಾನರಿಗೆ ಮತ್ತು ಪರಿಶಿಷ್ಟ ವರ್ಗದವರಿಗೆ ಸ್ಥಳಗಳನ್ನು ಕಾದಿಟ್ಟು ಸಂಯುಕ್ತ ಮತದಾರ ಸಂಘದ ಮುಖಾಂತರವಾಗಿಯೆ ನಡೆಯುವದು. ಅಲ್ಲದೆ ಪೂರ್ವ ಬಂಗಾಲದಿಂದ ಬಂದ ನಿರಾಶ್ರಿತರಿಗೂ ಮತಾಧಿಕಾರವನ್ನು ಕೊಡಲಾಗುವದು. ಈ ಯೋಜನೆಯಿಂದ ಪಡುಸ್ಥರಿಗೆಲ್ಲ ಮತಾಧಿಕಾರ ದೊರೆಯುದಿದ್ದರೂ ವ್ಯಾಪಕ ತಳಹದಿಯ ಮೇಲೆ ಚುನಾವಣೆ ನಡೆದಂತಾಗುವದು. ಇನ್ನು ಒಂದೆರಡು ವರುಷಗಳಲ್ಲಿಯೆ ಹೊಸ ಘಟನೆಯನ್ವಯ ಸಾರ್ವತ್ರಿಕ ಚುನಾವಣೆಗಳು ನಡೆಯಲಿರುವಾಗ ಬಹಳ ವೆಚ್ಚದ ಮತ್ತು ಭಾವನೆಗಳನ್ನು ಉದ್ರೇಕಿಸುವ ಈ ಚುನಾವಣೆಗಳನ್ನು ಈಗ ಹೂಡಬಾರದಾಗಿತ್ತು ಎಂದು ಹಲವರ ಅಭಿಪ್ರಾಯ. ಆದರೆ ಮುಖ್ಯಮಂತ್ರಿಗಳಾದ ಪಂಡಿತ ಜವಾಹರಲಾಲರು ಪರಿಸ್ಥಿತಿಯನ್ನೆಲ್ಲ ಪ್ರತ್ಯಕ್ಷ ತಿಳಿದುಕೊಂಡ ಅನಂತರ ಅಲ್ಲಿನ ಪ್ರಜೆಗಳ ಆಸೆ ಆಕಾಂಕ್ಷೆಗಳನ್ನು ಅರಿತುಕೊಂಡ ಬಳಿಕವೇ ಕಾರ್ಯ ಸಮಿತಿಯವರು ಈ ನಿರ್ಣಯಕ್ಕೆ ಬಂದಿದ್ದರಿಂದ ಸದ್ಯದ ಪ್ರಸಂಗದಲ್ಲಿ ಇದರ ಹೊರತು ಬೇರೆ ಮಾರ್ಗವೇ ಉಳಿದಿರಲಿಲ್ಲ ಎಂಬುದು ಸಿದ್ಧವಾಗುತ್ತದೆ. ಚುನಾವಣೆ ನಡೆವ ಮೊದಲು ಪ್ರತಿಷ್ಠಾಸಂಪನ್ನ ಜನರ ನಡುಗಾಲ ಸರಕಾರವನ್ನು ರಚಿಸಲಾಗುವದು. ಮುಂದಿನ ಚುನಾವಣೆಗೆ ಕಾಂಗ್ರೆಸ್ಸು ಹುರಿಯಾಳನ್ನಾರಿಸುವದನ್ನು ಕೇಂದ್ರ ಪಾರ್ಲಮೆಂಟರಿ ಸಮಿತಿಗೆ ಒಪ್ಪಿಸಿದ್ದು ಅತ್ಯಂತ ಜಾಣತನದ ಮಾತಾಗಿದೆ. ಇದರಿಂದ ಪ್ರಾಂತದಲ್ಲಿಯ ಕಾಂಗ್ರೆಸ್ ಪಕ್ಷ ಪಂಗಡ ಗುಂಪುಗಳ ಕೈವಾಡಕ್ಕೆ ಅವಕಾಶ ದೊರೆಯುವದಿಲ್ಲ. ಕಾಂಗ್ರೆಸ್ಸು ಹುರಿಯಾಳನ್ನು ಆರಿಸುವಾಗ ಬರಿ ಹಿಂದಿನ ಸೇವೆ ಸ್ವಾರ್ಥತ್ಯಾಗಗಳನ್ನಷ್ಟೇ ಗಮನಿಸದೆ, ಆಯಾ ವ್ಯಕ್ತಿಗಳಲ್ಲಿಯ ಆಡಳಿತ ಯೋಗ್ಯತೆ, ಅತ್ಯಂತಿಕ ಪ್ರಾಮಾಣಿಕತೆ ಮತ್ತು ನಿರ್ಮೋಹ ಚಾರಿತ್ರ್ಯ ಇವುಗಳನ್ನೂ ಲಕ್ಷಿಸಬೇಕಾದುದು ಕರ್ತವ್ಯವಾಗಿದೆ. ಸದ್ಯದಲ್ಲಿ ಪ್ರಾಂತವು ಗಂಭೀರ ಪರಿಸ್ಥಿತಿಯನ್ನು ಎದುರಿಸಬೇಕಾಗಿರುವದರಿಂದ ಆಡಳಿತೆಗೆ ಅವಶ್ಯವಾದ ಎಲ್ಲ ಗುಣಗಳುಳ್ಳ ಜನರ ಕೈಯಲ್ಲಿಯೆ ಅಧಿಕಾರಸೂತ್ರಗಳಿರುವದವಶ್ಯ. ಎಡ ಪಕ್ಷದವರೂ ಕಾಂಗ್ರೆಸ್ಸಿನ ಈ ಗೊತ್ತುವಳಿಯನ್ನು ಸ್ವಾಗತಿಸಿದೆ. ಇದರಿಂದ ಆಯಾ ಪಕ್ಷಪಂಗಡಗಳ ಬಲಾಬಲಗಳನ್ನು ಅಳೆಯಲಿಕ್ಕೂ ಅನುಕೂಲವಾಗುವದು. ಆದರೆ ಈ ಚುನಾವಣೆಗಳಲ್ಲಿ ದಾವದೇ ಬಗೆಯ ಅನ್ಯಾಯ, ಛಲನೆ, ಹಿಂಸೆ ಮೊದಲಾದವುಗಳಿಗೆ ಅವಕಾಶ ದೊರೆಯದಂತೆ ಎಲ್ಲರೂ ನೋಡಿಕೊಳ್ಳುವದು ಅತ್ಯಂತ ಅವಶ್ಯವಾಗಿದೆ; ಹಿಂದಿನ ಉಪಚುನಾವಣೆಯಲ್ಲಿ ನಡೆದ ಘಟನೆಗಳ ಪುನರಾವೃತ್ತಿಯಾಗದಂತೆ ನೋಡಿಕೊಳ್ಳುವ ಹೊಣೆ ಎಲ್ಲಕ್ಕೂ ಹೆಚ್ಚಾಗಿ ಎಡಪಕ್ಷದವರ ಮೇಲೆ ಇದೆ ಎಂಬುದು ನಿರ್ವಿವಾದವಾಗಿದೆ. ಅವರು ತಮ್ಮ ಹೊಣೆಗಾರಿಕೆಯನ್ನು ತಿಳಿದುಕೊಂಡು ವರ್ತಿಸುವರೆಂದು ನಂಬುತ್ತೇವೆ.

× × ×

ದ್ವಿತೀಯ ಸ್ವಾತಂತ್ರ್ಯ ದಿವಸವನ್ನೆಂತು ಆಚರಿಸಬೇಕೆಂಬ ಬಗೆಗೆ ಕಾಂಗ್ರೆಸ ಕಾರ್ಯ ಸಮಿತಿಯು ಆದೇಶವಿತ್ತಿದೆ. ಅಂದು ಕೇವಲ ಸಡಗರದಿಂದಿಗಷ್ಟೇ ಅಲ್ಲ ಎಲ್ಲ ಜನಗಳೊಂದಿಗೂ ಸಹಕರಿಸುವ ಕಾರ್ಯಯೋಜನೆ ಇರಬೇಕು. ಸರಕಾರ ಸಮಿತಿಗಳಿಂದಾಗುವ ಈ ಕಾರ್ಯಕ್ರಮವನ್ನು ಪ್ರಾಂತೀಯ ಕಾಂಗ್ರೆಸ ಸಮಿತಿಗಳು ಇಟ್ಟುಕೊಳ್ಳಬೇಕು. ಆಹಾರ ಸಮಸ್ಯೆಯನ್ನು ಬಿಡಿಸಲು ಕೃತಿಯೊಳ್ಳು ಸಕ್ರಿಯವಾಗುವ ಸೇವೆಯನ್ನು ಸಲ್ಲಿಸಬೇಕು. ಬೀಳು ಭೂಮಿಯನ್ನು ಸಾಗುವಳಿಸಬೇಕು ಮೊದಲಾದ ಕಾರ್ಯಕ್ರಮವನ್ನು ಕೈಕೊಳ್ಳಬೇಕೆಂದು ಆದೇಶಿಸಲಾಗಿದೆ. ಭಾರತೀಯರೆಲ್ಲರೂ ಇತ್ತ ಗಮನಿಸುವರೆಂದು ಆಶಿಸುತ್ತೇವೆ.

# ಆಹಾರ ಸ್ವಾವಲಂಬನದ ಯೋಜನೆ

## ಆಹಾರ ಪರಿಷತ್ತಿನಲ್ಲಿ ಗೊತ್ತುವಳಿಗಳು ಘಟನಾಸಮಿತಿಯಲ್ಲಿ ಮಹತ್ವದ ಕಲಮುಗಳ ಸ್ವೀಕಾರ—ಕರ್ನಾಟಕದ ಮುಂದಾಳುಗಳಿಗೆ ಗವರ್ನರ ಜನರಲ್‌ರ ಭೆಟ್ಟಿ

### ಘಟನಾಸಮಿತಿ

ಆರು ವಾರಗಳ ನಂತರ ಘಟನಾಸಮಿತಿಯ ಸಭೆಯು ೨೯ ನೇ ತಾರೀಕು ಅಧ್ಯಕ್ಷ ಡಾ. ರಾಜೇಂದ್ರಪ್ರಸಾದರ ಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು. ರಾಜ್ಯಘಟನೆಯಲ್ಲಿ ಇನ್ನುಳಿದ ೬೦ ಕಲಮುಗಳಲ್ಲಿ ಅಂದು ನಾಲ್ಕು ಕಲಮುಗಳನ್ನು ಸ್ವೀಕರಿಸಲಾಯಿತು. ಪ್ರಾಂತಗಳ ಮೇಲ್ಮನೆಗಳಿರಬೇಕೋ ಬಾರದೋ ಎಂಬ ಬಗ್ಗೆ ತೀವ್ರ ಚರ್ಚೆಯಾಗಿ ಅದರ ನಿರ್ಣಯವನ್ನು ಸದ್ಯಕ್ಕೆ ಮಾಡದೆ ಭಾವೀ ಪಾರ್ಲಮೆಂಟಿಗೇ ಅದನ್ನು ಒಪ್ಪಿಸಿ ಕೊಡಬೇಕೆಂದು ಡಾ. ಅಂಬೇಡಕರರು ಸೂಚಿಸಿದ ತಿದ್ದುಪಡಿಯು ಸ್ವೀಕೃತವಾಯಿತು. ಈ ಮೇಲ್ಮನೆಗಳ ರಚನೆಯ ಬಗ್ಗೆಯೂ ವಿಶೇಷ ಚರ್ಚೆಯಾಗಿ ಅದನ್ನು ಕರಡುಸಮಿತಿಗೆ ಒಪ್ಪಿಸಬೇಕೆಂದು ಗೊತ್ತಾಯಿತು.

ರಾಷ್ಟ್ರಭಾಷೆಯ ಪ್ರಶ್ನೆಯನ್ನು ಪಾರ್ಲಮೆಂಟಿಗೆ ಒಪ್ಪಿಸಬೇಕೋ ಬೇಡವೊ ಎಂಬುದನ್ನು ಈ ಸಭೆಯೇ ನಿರ್ಣಯಿಸುವದು. ಅದಕ್ಕೆ ಸಂಬಂಧಿಸಿದ ಕಲಮು ಬಂದಾಗ ಅದರ ಚರ್ಚೆ ಮಾಡೋಣ ಎಂದು ಅಧ್ಯಕ್ಷರು, ಶೇಠ ಗೋವಿಂದ ದಾಸರು ಕೇಳಿದ ಪ್ರಶ್ನೆಗೆ ಉತ್ತರಿಸುತ್ತ ಹೇಳಿದರು.

ಶಾಸನಸಭೆಗಳ ಕಾರ್ಯದರ್ಶಿಗಳ ಕೆಲಸದಲ್ಲಿ ಇತರ ಅಧಿಕಾರಿಗಳು ಕೈಹಾಕಬಾರದೆಂಬ ಹೊಸ ಕಲಮನ್ನು ಜೋಡಿಸಬೇಕೆಂಬ ಡಾ. ಅಂಬೇಡಕರರ ಸೂಚನೆಯು ಸ್ವೀಕೃತವಾಯಿತು. ವರಿಷ್ಠನ್ಯಾಯಾಧೀಶರಿಗೆ ಎರಡನೇ ಪರಿಶಿಷ್ಟದಲ್ಲಿ ಹೇಳಿದ ಸಂಬಳವನ್ನು ಕೊಡಬೇಕು; ಅವರ ಹಕ್ಕುಬಾಧ್ಯತೆಗಳು, ಹಕ್ಕಿನ ರಜೆ, ನಿವೃತ್ತಿವೇತನ ಮೊದಲಾದವುಗಳನ್ನು ಪಾರ್ಲಮೆಂಟು ಕಾಲಕಾಲಕ್ಕೆ ನಿರ್ಣಯಿಸಬೇಕು ಇಲ್ಲವೆ ಈ ಬಗ್ಗೆ ಕಾಯದೆ ಮಾಡಬೇಕು. ಅಲ್ಲಿಯವರೆಗೆ ಎರಡನೇ ಪರಿಶಿಷ್ಟದಲ್ಲಿ ಸೂಚಿಸಿದಂತೆ ನಡೆದುಕೊಳ್ಳಬೇಕೆಂದು ಗೊತ್ತಾಯಿತು.

ಒಂದನೇ ತಾರೀಕು ಸಭೆ ಪ್ರಾರಂಭವಾದಾಗ ಪ್ರಾಂತಗಳು ಕೆಳಮನೆಯಲ್ಲಿ ಪಾಸಾದ ಮಸೂದೆಯನ್ನು (ಹಣಕಾಸಿನ ಮಸೂದೆಯನ್ನು ಹೊರತು ಪಡಿಸಿ) ಮೇಲ್ಮನೆಯು ಮೊದಲ ಸಲ ಮೂರು ತಿಂಗಳು ಹಾಗು ಎರಡನೆಯ ಸಲ ಒಂದು ತಿಂಗಳು ಮಾತ್ರ ತಡೆಹಿಡಿಯಬಲ್ಲದೆಂಬ ಕಲಮನ್ನು ವಿಶೇಷ ಚರ್ಚೆಯ ಅನಂತರ ಸ್ವೀಕರಿಸಲಾಯಿತು. ಕೆಳಮನೆಯು ಪಾಸಾದ ಒಂದು ವಿಷಯವನ್ನು ಈ ರೀತಿ ಸ್ವೀಕರಿಸಿ ಮೇಲ್ಮನೆಗೆ ಕಳಿಸಿದನಂತರ ಒಂದು ತಿಂಗಳಲ್ಲಿ ಮೇಲ್ಮನೆಯು ಅದನ್ನು ಸ್ವೀಕರಿಸದಿದ್ದರೆ ಆ ಮಸೂದೆ ಪಾಸಾಯಿತೆಂದು ತಿಳಿಯಬೇಕೆಂದು ಈ ಹೊಸ ಕಲಮಿನಲ್ಲಿ ಹೇಳಿದೆ. ಈ ಸಂಬಂಧದಲ್ಲಿ ಸ್ವಾರಸ್ಯದ ಚರ್ಚೆ ನಡೆದ ಬಳಿಕ ಅದು ಸ್ವೀಕರಿಸಲಾಯಿತು.

ಚೀಫ ಕಮೀಶನರ ಅಥವಾ ಲೆಫ್ಟನೆಂಟ್ ಗವರ್ನರರ ಮುಖಾಂತರ ಕೇಂದ್ರವು ಆಡಳಿತ ನಡೆಸುತ್ತಿರುವ ಪ್ರಾಂತಗಳಲ್ಲಿ ಶಾಸನಸಭೆಗಳನ್ನೇರ್ಪಡಿಸುವ, ಮಂತ್ರಿಮಂಡಲ ಇಲ್ಲವೆ ಸಲಹೆ ಸಮಿತಿಯನ್ನು ಸ್ಥಾಪಿಸುವ ಅಧಿಕಾರವನ್ನು ಪಾರ್ಲಮೆಂಟಿಗೆ ಕೊಡುವ ನಿರ್ಣಯವಿಂದು ಸ್ವೀಕೃತವಾಯಿತು. ಪಾರ್ಲಮೆಂಟು ಕಾಯದೆ ಮಾಡುವವರೆಗೆ ಕೊಡಗಿನ ಶಾಸನಸಭೆಯ ಅಧಿಕಾರ, ಕಾರ್ಯಕ್ಷೇತ್ರ ಇವು ಈ ಘಟನೆ ಜಾರಿಯಲ್ಲಿ ಬರುವ ಮೊದಲು ಇದ್ದಂತೆಯೆ ಉಳಿಯತಕ್ಕದ್ದು. ಕೊಡಗಿನಲ್ಲಿಯ ಕಂದಾಯ ವಸೂಲಿ ಹಾಗು ಹಣದ ವೆಚ್ಚ ಇವುಗಳ ಬಗ್ಗೆ ಅಧ್ಯಕ್ಷರು ಬೇರೆ ವ್ಯವಸ್ಥೆ ಮಾಡುವವರೆಗೆ ಮೊದಲಿದ್ದಂತೆ ನಡೆಯಬೇಕು ಎಂಬ ಕಲಮು ಸ್ವೀಕೃತವಾಯಿತು.

### ಅಧ್ಯಕ್ಷನಿಗೆ ವಿಶೇಷಾಧಿಕಾರ

ಹಿಂದುಸ್ತಾನದ ಇಲ್ಲವೆ ಅದರ ಭಾಗಕ್ಕೆ ಯುದ್ಧ, ಪರಚಕ್ರದಾಳಿ ಇಲ್ಲವೆ ಅಂತರಿಕ ದಾಳಿಯ ಭಯದಿಂದ ಸಂರಕ್ಷಣೆಗೆ ಧಕ್ಕೆಯುಂಟಾಗುವಂಥ ಗಂಭೀರ ಪರಿಸ್ಥಿತಿ ಉದ್ಭೂತವಾಗಿದೆಯೆಂದೆನಿಸಿದಾಗ ಅಧ್ಯಕ್ಷನಿಗಿರುವ ವಿಶೇಷಾಧಿಕಾರದ ಕಲಮಿನ ಚರ್ಚೆ ತೀವ್ರ ನಡೆಯಿತು. ಅಂತಹ ಸಮಯದಲ್ಲಿ ಅಧ್ಯಕ್ಷನು ಗಂಭೀರ ಪರಿಸ್ಥಿತಿಯ ಘೋಷಣೆ ಮಾಡಬಲ್ಲನು. ಮತ್ತೊಂದು ಘೋಷಣೆಯನ್ನು ಹೊರಡಿಸಿ ಅದನ್ನು ರದ್ದುಗೊಳಿಸಬಲ್ಲನು. ಅಧ್ಯಕ್ಷನು ಈ ಘೋಷಣೆಯನ್ನು ಶಾಸನಸಭೆಯ ಮುಂದಿಡಬೇಕು. ಗೊತ್ತುವಳಿಯ ಮೂಲಕ ಶಾಸನಸಭೆಯು ಅದಕ್ಕೆ ಒಪ್ಪಿಗೆ ಕೊಡದಿದ್ದರೆ ಎರಡು ತಿಂಗಳಲ್ಲಿ ಅದರ ಮುಕ್ತಾಯವಾಯಿತೆಂದು ಈ ಕಲಮಿನಲ್ಲಿ ಹೇಳಿದೆ. ಹೊಸ ಪ್ರಜಾಪ್ರತಿನಿಧಿ ಸಭೆ ಸೇರಬೇಕಾಗಿದ್ದ ಪರಿಸ್ಥಿತಿಯಲ್ಲಿ ಅದು ಸೇರಿ ಒಂದು ತಿಂಗಳೊಳಗಾಗಿ ಮನ್ನಣೆ ದೊರೆಯಬೇಕು. ಅಂತರಿಕ ಅಶಾಂತಿ ಹಾಗು ಹೊರಗಿನ ಆಘಾತದಿಂದ ಪ್ರಾಂತಗಳಲ್ಲಿ ಗಂಭೀರ ಪರಿಸ್ಥಿತಿ ಉದ್ಭೂತವಾಗಿ ಘಟನೆಯು ಮುರಿದು ಬೀಳುವ ಪ್ರಸಂಗ ಬಂದರೆ ಅವುಗಳನ್ನು ಕೇಂದ್ರವು ಎಂತು ರಕ್ಷಿಸಬೇಕೆಂಬ ವಿಷಯಕ್ಕೆ ಸಂಬಂಧಿಸಿದ ಮೂರು ಕಲಮುಗಳು ಬುಧವಾರ ಸಭೆಯಲ್ಲಿ ಸ್ವೀಕೃತವಾದವು. ಗಂಭೀರ ಪರಿಸ್ಥಿತಿ ಪ್ರಾಪ್ತವಾಗಿದೆಯೆಂದು ಗವರ್ನರನು ತಿಳಿಸಿದ ಕೂಡಲೆ ಅಧ್ಯಕ್ಷನು ಗಂಭೀರ ಪರಿಸ್ಥಿತಿಯ ಘೋಷಣೆಮಾಡಿ ಪ್ರಾಂತದ ಆಡಳಿತೆಯನ್ನು ತಾನೇ ವಹಿಸಿಕೊಳ್ಳಬಲ್ಲನೆಂದು ಈ ಕಲಮಿನಲ್ಲಿ ಹೇಳಿದೆ. ಅಂತಹ ಸಮಯದಲ್ಲಿ ಪ್ರಾಂತದ ಶಾಸನಿಕ ಅಧಿಕಾರವೂ ಅಧ್ಯಕ್ಷನಿಗೆ ಪ್ರಾಪ್ತವಾಗುತ್ತದೆ. ಇದು ಈ ಮೊದಲು ಇದ್ದ ೯೩ ನೇ ಕಲಮಿನಂತಿದ್ದರೂ ರಚನೆಯಲ್ಲಿ ಅದಕ್ಕಿಂತ ಭಿನ್ನವಾಗಿದೆ. ಈ ಕಲಮುಗಳ ಮೇಲೆ ತೀವ್ರ ಚರ್ಚೆ ನಡೆಯಿತು. ಪಂಡಿತ ಹೃದಯನಾಥ ಕುಂಜರು, ನಾಜೀರುದ್ದೀನ ಮೊದಲಾದವರು ಇದನ್ನು ವಿರೋಧಿಸಿದರು.

### ಆಹಾರ ಮಂತ್ರಿಗಳ ಪರಿಷತ್ತು

ಕಳೆದ ವಾರ ದಿಲ್ಲಿಯಲ್ಲಿ ಹಿಂದುಸ್ತಾನ ಸರಕಾರದ ಒಕ್ಕಲುತನ ಮತ್ತು ಆಹಾರ ಮಂತ್ರಿಗಳಾದ ಶ್ರೀ ಜಯರಾಮದಾಸ ದೌಲತರಾಮರ ಅಧ್ಯಕ್ಷತೆಯಲ್ಲಿ ಆಹಾರಮಂತ್ರಿಗಳ ಪರಿಷತ್ತು ಸೇರಿ ಮಹತ್ವದ ಗೊತ್ತುವಳಿಯನ್ನು ಸ್ವೀಕರಿಸಲಾಯಿತು. ೧೯೫೧ ರ ನಂತರ ಆಹಾರ ಧಾನ್ಯಗಳ ಆಯಾತವನ್ನು ನಿಲ್ಲಿಸಬೇಕು, ಆಹಾರಪದಾರ್ಥಗಳ ಉತ್ಪಾದನೆಯನ್ನು ಹೆಚ್ಚಿಸಬೇಕು, ಸೀದಾಪದ್ಧತಿಯಿಂದ ಕೊಡುವ ಧಾನ್ಯವು ಯೋಗ್ಯತರಗತಿಯದಿರಬೇಕು ಮತ್ತು ಅವನ್ನು ಕೆಡದಂತೆ ನೋಡಿಕೊಳ್ಳಬೇಕು ಮೊದಲಾದ ವಿಷಯಗಳು ಈ ಗೊತ್ತುವಳಿಯಲ್ಲಿ ಅಡಕವಾಗಿವೆ. ನಿಯಂತ್ರಿತ ಬೆಲೆಗಿಂತ ಹೆಚ್ಚು ಧಾರಣೆಗೆ ಬಹಿರಂಗ ಪೇಟೆಯಲ್ಲಿ ಆಹಾರ ಧಾನ್ಯಗಳು ಮಾರಲ್ಪಡದಂತೆ ನೋಡಿಕೊಳ್ಳಬೇಕೆಂದು ಗೊತ್ತಾಯಿತು. ಅಕ್ಕಿಯನ್ನು ಪಾಲಿಶ್ ಮಾಡುವದರಿಂದ ಅಕ್ಕಿಯ ಪ್ರಮಾಣವು ಕಡಿಮೆಯಾಗುವದಲ್ಲದೆ ಅದರಲ್ಲಿಯ ಸತ್ವವೂ ಹಾಳಾಗುವದೆಂದು ಕಂಡು ಬಂದಿದ್ದರಿಂದ ಅಕ್ಕಿಯ ಪಾಲಿಶನ್ನು ಪೂರ್ಣ ನಿಲ್ಲಿಸಬೇಕೆಂದು ನಿರ್ಧರಿಸಲಾಯಿತು. ಮಿತಭೋಜನದ ತತ್ವಕ್ಕೂ ಒಪ್ಪಿಗೆ ಕೊಡಲಾಯಿತು. ಧಾನ್ಯಗಳನ್ನು ಆಯಾತ ಮಾಡುವಾಗ, ಬಂದರದಲ್ಲಿ ಅವನ್ನು ಇಳಿಸುವಾಗ, ಇಳಿಸಿದ ಅನಂತರ ಆಯಾ ಕೇಂದ್ರಗಳಿಗೆ ಅವನ್ನು ಸಾಗಿಸುವಾಗ ಬಹಳ ನಷ್ಟ ಸಂಭವಿಸುವದುಂಟು. ಮಳೆ ಹೊಕ್ಕು ಧಾನ್ಯ ಕೆಡುವದುಂಟು. ಈ ರೀತಿ ಧಾನ್ಯ ಕೆಡದಂತೆ ನೋಡಿಕೊಳ್ಳಬೇಕೆಂದು ಗೊತ್ತಾಯಿತು. ಈ ಪರಿಷತ್ತಿನಲ್ಲಿ ಆಯಾ ಪ್ರಾಂತೀಯ ಆಹಾರ ಮಂತ್ರಿಗಳು ತಮ್ಮ ಪ್ರಾಂತಗಳಲ್ಲಿಯ ಪರಿಸ್ಥಿತಿ ವಿವರಿಸಿದರು. ಜನತೆಗೆ ಆಹಾರವನ್ನೊದಗಿಸಿ ಅತಿಪ್ರಸರಣವನ್ನು ತಡೆಯಲು ಜಿಲ್ಲೆಗಳಲ್ಲಾದರೂ ಸೀದಾ ಪದ್ಧತಿಯಿರಬೇಕೆಂದು ಮುಂಬಯಿಯ ಆಹಾರಮಂತ್ರಿಗಳು ಅಭಿಪ್ರಾಯಪಟ್ಟರು. ಧಾನ್ಯ ಎತ್ತುವಳಿಯ ಗುತ್ತಿಗೆಯನ್ನು ಕೊಡುವದನ್ನೂ ಅವರು ಸೂಚಿಸಿದರು. ಆಹಾರೋತ್ಪಾದನೆಯನ್ನು ಹೆಚ್ಚಿಸುವಲ್ಲಿ ಮಿತಿಮೀರಿ ಪ್ರಯತ್ನಿಸಲಾಗುವದು. ಸೀದಾ ಮುಂತಾದ ವಿಷಯಗಳಲ್ಲಿ ಕೇಂದ್ರದ ಧೋರಣವನ್ನೇ ವಹಿಸಲಾಗುವದುಎಂದು ಮದ್ರಾಸ ಮಂತ್ರಿಗಳು ಹೇಳಿದರು ಆಯಾತವನ್ನು ನಿಲ್ಲಿಸಲಾಗುವದೆಂಬ ಧೋರಣವನ್ನು ಬಿಹಾರ ಮಂತ್ರಿಗಳು ಸ್ವಾಗತಿಸಿ ಧ್ಯೇಯ ಸಾಧನೆಗಾಗಿ ಮಿತಿಮೀರಿ ಪ್ರಯತ್ನಿಸಬೇಕಾಗುವದೆಂದು ಅಭಿಪ್ರಾಯ ಪಟ್ಟರು. ಬರುವ ಎರಡು ವರುಷಗಳಲ್ಲಿ ಆಹಾರೋತ್ಪಾದನೆಯ ಹೆಚ್ಚಳದ ಗುರಿಯನ್ನು ಇಟ್ಟುಕೊಳ್ಳಲು ಆಹಾರಮಂತ್ರಿಗಳು ಸಿದ್ಧರಿರುವರೋ ಮತ್ತು ಅದಕ್ಕನುಗುಣವಾಗಿ ತಮ್ಮ ಆಹಾರಧೋರಣವನ್ನು ನಿರ್ಧರಿಸುವರೋ ಎಂದು ಆಹಾರಕಮೀಶನರರಾದ ಶ್ರೀ ಆರ್. ಕೆ. ಪಾಟೀಲರು ಆಹಾರ ಮಂತ್ರಿಗಳಿಗೆ ಕೇಳಿದರು. ಕೇಂದ್ರದಿಂದ ಸಹಾಯ ಪಡೆದು ಗ್ರಾಮಾಂತರಗಳಲ್ಲಿಯೂ ಸೀದಾ ಪದ್ಧತಿಯನ್ನು ಪ್ರಾರಂಭಿಸಬೇಕೆಂದು ಹಲವು ಮಂತ್ರಿಗಳು ಅಭಿಪ್ರಾಯಪಡುತ್ತಿರುವದರ ರಹಸ್ಯವು ತಮಗೆ ಹೊಳೆಯದೆಂದು ಯುಕ್ತಪ್ರಾಂತದ ಆಹಾರಮಂತ್ರಿಗಳು ಹೇಳಿದರು. ಎಲ್ಲ ಪ್ರಾಂತಗಳಲ್ಲಿ ಒಂದೇ ಬಗೆಯ ನಿಯಂತ್ರಣವಿರತಕ್ಕದ್ದು. ಉಳಿಕೆಯ ಪ್ರಾಂತಗಳಲ್ಲಿಯೂ ಎತ್ತುವಳಿಯ ಧೋರಣ ಹೆಚ್ಚು ಬಿಗಿಯಾಗಿರಬೇಕೆಂದು ಪೂರ್ವ ಪಂಜಾಬದ ಮಂತ್ರಿಗಳು ಅಭಿಪ್ರಾಯಪಟ್ಟರು. ಕೇಂದ್ರ ಸರಕಾರದ ಆಹಾರಮಂತ್ರಿಗಳು ನಿಯಂತ್ರಣದ ಮತ್ತು ಸೀದಾ ಪದ್ಧತಿಯ ಅವಶ್ಯಕತೆಯನ್ನು ಪ್ರತಿಪಾದಿಸಿದರು. ಆದಷ್ಟು ಬೇಗ ಈ ಪದ್ಧತಿಗೆ ಅರ್ಧಚಂದ್ರ ಕೊಡುವ ಬಗ್ಗೆ ನಾವೆಲ್ಲ ಪ್ರಯತ್ನಿಸಬೇಕೆಂದು ಮಧ್ಯಪ್ರಾಂತದ ಮುಖ್ಯಮಂತ್ರಿಗಳು ಅಭಿಪ್ರಾಯಪಟ್ಟರು. ಮೇಲೆ ಹೇಳಿದಂತೆ ಆಹಾರ ಧೋರಣದ ಗೊತ್ತುವಳಿ ಸ್ವೀಕೃತವಾಗಿ ಪರಿಷತ್ತು ಕೊನೆಗೊಂಡಿತು.

### ಹೊಸ ಜಿಲ್ಹೆಗಳು

ಮುಂಬಯಿ ಪ್ರಾಂತದಲ್ಲಿ ವಿಲೀನ ಹೊಂದಿದ ಸಂಸ್ಥಾನಪ್ರದೇಶಗಳೆಲ್ಲ ಮುಂಬಯಿಪ್ರಾಂತದ ಆಡಳಿತೆಯಲ್ಲಿ ಅಗಸ್ಟ ಒಂದರಿಂದ ಸಮಾವೇಶವಾಗಿ ಏಕಸೂತ್ರತೆ ಪ್ರಾರಂಭವಾಗಿದೆ. ೮ ತಿಂಗಳು ಹಿಂದೆ ಪ್ರಾರಂಭವಾದ ಈ ವಿಲೀನೀಕರಣವು ನಾಲ್ಕು ಘಟ್ಟಗಳಲ್ಲಿ ಪೂರ್ಣವಾಯಿತು. ಮೊದಲು ೧೭ ದಕ್ಷಿಣ ಸಂಸ್ಥಾನಗಳು ೧೯೪೮ ಮಾರ್ಚ ೮ ಕ್ಕೆ ವಿಲೀನವಾದವು. ಆ ಬಳಿಕ ಮೂರು ತಿಂಗಳ ಅನಂತರ ಜೂನ ೧೦ ಕ್ಕೆ ಗುಜರಾಥ ಸಂಸ್ಥಾನಗಳು ೧೯೪೯ ಮಾರ್ಚ ಒಂದಕ್ಕೆ ಕೊಲ್ಹಾಪುರ ಸಂಸ್ಥಾನವು ಮತ್ತು ೧೯೪೯ ಮೇ ಒಂದಕ್ಕೆ ಬಡೋದೆ ಸಂಸ್ಥಾನವು ವಿಲೀನವಾದವು— ಈ ಸಂಸ್ಥಾನ ವಿಲೀನವಾದ್ದರಿಂದ ಪ್ರಾಂತದ ಕ್ಷೇತ್ರವು ೩೦೪೦೫ ಚದುರ ಮೈಲುಗಳಷ್ಟು ಹೆಚ್ಚಾಯಿತಲ್ಲದೆ ಜನಸಂಖ್ಯೆ ೬೩೪೭೦೦೦ ದಿಂದ ಹೆಚ್ಚಾಯಿತು. ಇದರಲ್ಲಿ ೧೭ ದಕ್ಷಿಣ ಸಂಸ್ಥಾನಗಳ ವಿಸ್ತಾರವು ೭೦೫೧ ಚದುರುಮೈಲು ಜನಸಂಖ್ಯೆ ೧೭ ಲಕ್ಷ ಇರುತ್ತದೆ. ಕೊಲ್ಹಾಪುರ ಸಂಸ್ಥಾನದ ವಿಸ್ತಾರ ೩೨೧೦ ಚದುರ ಮೈಲು, ಜನಸಂಖ್ಯೆ ೧೦೯೨೦೪೩ ಇರುವದು. ಈ ದಕ್ಷಿಣ ಸಂಸ್ಥಾನಗಳ ವಾರ್ಷಿಕ ಉತ್ಪನ್ನವು ಸುಮಾರು ಒಂದು ಕೋಟಿ ४३ ಲಕ್ಷ ರೂಪಾಯಿಗಳಷ್ಟಿದೆ. ಕೊಲ್ಹಾಪೂರ ಸಂಸ್ಥಾನದ ಉತ್ಪನ್ನವು ೧೩೫ ಲಕ್ಷ ರೂಪಾಯಿ ಇದೆ. ವಿಲೀನವಾದ ಈ ಭಾಗಗಳಲ್ಲಿ ೭ ಹೊಸ ಜಿಲ್ಹೆಗಳನ್ನು ಮಾಡಲಾಗಿದೆ. ಅವೆಂದರೆ ಕೊಲ್ಹಾಪುರ, ದಕ್ಷಿಣ ಸಾತಾರಾ, ಬಡೋದೆ, ಸಬರಕಂಠಾ, ಬನಾಸಕಂಠಾ, ಮಹಸಾದ ಮತ್ತು ಅಮ್ರೇಲಿ. ಪ್ರಾಂತದಲ್ಲಿ ಜಾರಿಯಲ್ಲಿದ್ದ ಎಲ್ಲ ಕಾಯ್ದೆಗಳು ಈ ಸಂಸ್ಥಾನ ಪ್ರದೇಶಗಳಿಗೂ ಇನ್ನು ಮುಂದೆ ಅನ್ವಯಿಸುವವಾದರೂ ಕೊಲ್ಹಾಪುರ ಮತ್ತು ಬಡೋದೆಗಳಿಗೆ ಕೆಲ ಸವಲತ್ತುಗಳನ್ನು ಕೊಡಲಾಗಿದೆ. ಈ ವಿಲೀನೀಕರಣದಿಂದ ಪ್ರಾಂತದ ಆಡಳಿತೆಯ ವೆಚ್ಚವು ಹೆಚ್ಚುವದೆಂದೂ ಇದಕ್ಕಾಗಿ ಕೇಂದ್ರದಿಂದ ಹಣವನ್ನು ಕೇಳಬೇಕಾಗುವದೆಂದೂ ಮುಂಬಯಿ ಸರಕಾರದ ವಕ್ತಾರರೊಬ್ಬರು ಅಭಿಪ್ರಾಯಪಟ್ಟರು. ಈ ಸಂಬಂಧದಲ್ಲಿ ತಜ್ಞರೊಬ್ಬರನ್ನು ನಿಯಮಿಸಿ ಆರು ತಿಂಗಳೊಳಗಾಗಿ ಹಣಕಾಸಿನ ಮೇಲಾಗುವ ಪ್ರತಿಕ್ರಿಯೆಯನ್ನು ತಿಳಿದುಕೊಳ್ಳಲಾಗುವದು ಈ ಜಿಲ್ಹೆಗಳಲ್ಲಿ ಪ್ರದೇಶಗಳನ್ನು ಕೂಡಿಸುವಾಗ ಕರ್ನಾಟಕದ ಹಕ್ಕುಬಾಧ್ಯತೆಗಳನ್ನು ಪೂರ್ಣವಾಗಿ ಅಲಕ್ಷಿಸಲಾಗಿದೆ. ಬಹಳ ಮಟ್ಟಿಗೆ ಕನ್ನಡವಾಗಿದ್ದ ಪ್ರದೇಶವನ್ನು ಮರಾಠಿ ಜಿಲ್ಹೆಯಲ್ಲಿ ಕೂಡಿಸಲಾಗಿದೆ. ಇದರಿಂದ ಆಡಳಿತೆಯು ಸುಗಮವಾಗಿ ಸಾಗಲಾರದು. ನಾಗರಿಕರ ಮೂಲಭೂತ ಹಕ್ಕುಗಳಿಗೂ ಅರ್ಧಚಂದ್ರ ಕೊಟ್ಟಂತಾಗುವದು. ಈ ಹೊಸ ಜಿಲ್ಹೆಗಳ ನಿರ್ಮಾಣದ ಕರಡು ಪ್ರಸಿದ್ಧವಾದಾಗಲೆ ಕನ್ನಡ ಪ್ರದೇಶವನ್ನೆಲ್ಲ ಕನ್ನಡ ಭಾಗದಲ್ಲಿ ಸೇರಿಸಬೇಕೆಂದು ಕರ್ನಾಟಕದಲ್ಲಿಯ ಸಂಘಸಂಸ್ಥೆಗಳು, ಪತ್ರಿಕೆಗಳು, ಜನಸಾಮಾನ್ಯವು ಒಂದೇ ಸವನೆ ಕೇಳಿಕೊಂಡರೂ ಸರಕಾರದವರು ಅತ್ತ ಗಮನಿಸದಿರುವದು ಶೋಚನೀಯವಾಗಿದೆ. ಇನ್ನು ಮೇಲಾದರೂ ಈ ಅನ್ಯಾಯದ ಪರಿಹಾರ ಮಾಡುವರೆಂದು ಆಶಿಸಬಹುದೋ?

### ಗವರ್ನರ ಜನರಲ್ಲರ ಭೆಟ್ಟಿ

ಕರ್ನಾಟಕ ಪ್ರಾಂತೀಯ ಕಾಂಗ್ರೆಸ ಸಮಿತಿಯ ಅಧ್ಯಕ್ಷರಾದ ಶ್ರೀ ಎಸ್. ನಿಜಲಿಂಗಪ್ಪ ಮತ್ತು ದಾತಾರ ಬಳವಂತರಾವ, ಜಿನರಾಜ ಹೆಗ್ಗಡೆ, ಹಾಗು ಬಸರೀಗಿಡದ ವೀರಪ್ಪ ಇವರಿಗೆ ಗವರ್ನರ ಜನರಲ್ಲರಾದ ಶ್ರೀ ಚಕ್ರವರ್ತಿ ರಾಜಗೋಪಾಲಾಚಾರ್ಯರು ೩ ನೇ ತಾರೀಕಿನ ದಿನ ಸಂದರ್ಶನವನ್ನಿತ್ತರೆಂದು ಸರಕಾರೀ ಭವನದಿಂದ ಪ್ರಕಟನೆ ಹೊರಟಿದೆ. ಕರ್ನಾಟಕ ಪ್ರಾಂತೀಕರಣದ ಸಂಬಂಧದಲ್ಲಿಯೇ ಈ ಭೆಟ್ಟಿಯಾಯಿತೆಂದು ಬೇರೆ ಹೇಳಬೇಕಿಲ್ಲ. ಈ ಮಾತುಕತೆ ೪೫ ನಿಮಿಷ ನಡೆಯಿತು. ಕರ್ನಾಟಕ ಏಕೀಕರಣ, ವಿಶ್ವವಿದ್ಯಾಲಯ, ಮೈಸೂರಿನ ಜವಾಬದಾರೀಕರಣ, ಮೊದಲಾದ ವಿಷಯಗಳ ಬಗ್ಗೆ ಚರ್ಚೆ ನಡೆಯಿತು. ಕರ್ನಾಟಕ ಏಕೀಕರಣದ ಪ್ರಶ್ನೆ ತೀವ್ರ ಬಗೆಹರಿಯದಿದ್ದರೆ ಕರ್ನಾಟಕದಲ್ಲಿ ಅಸಂತೋಷ ಹರಡುವದೆಂದು ಶಿಷ್ಟಮಂಡಲದವರು ಹೇಳಿದರು. ಗವರ್ನರ ಜನರಲ್ಲರು ಎಲ್ಲವನ್ನು ಸಹಾನುಭೂತಿಪೂರ್ವಕವಾಗಿ ಕೇಳಿಕೊಂಡದ್ದಲ್ಲದೆ ಕೆಲ ಪ್ರಶ್ನೆಗಳನ್ನು ಹಾಕಿದರಂತೆ. ಬಸರೀಗಿಡದವರೊಡನೆ ಶ್ರೀ ರಾಜಾಜಿಯವರು ಕನ್ನಡದಲ್ಲಿಯೇ ಮಾತಾಡಿದರು. ಶ್ರೀ ಬಳವಂತರಾಯರು ಮತ್ತು ಜಿನರಾಜರು ಕಳೆದ ವಾರದಿಂದ ದಿಲ್ಲಿಯಲ್ಲಿ ಉಳಿದುಕೊಂಡು ಕರ್ನಾಟಕ ಏಕೀಕರಣದ ವಿಷಯದಲ್ಲಿ ಪ್ರಯತ್ನ ನಡೆಸಿರುವರು. ಶ್ರೀ ಎಸ್. ನಿಜಲಿಂಗಪ್ಪನವರೊಡಗೂಡಿ ಅವರು ಮೈಸೂರು ಮುಖ್ಯ ಮಂತ್ರಿ ಶ್ರೀ ಕೆ. ಚಂಗಲರಾಯರೆಡ್ಡಿಯವರನ್ನು ಭೆಟ್ಟಿಯಾದರು. ಈ ಮೂವರೂ ಕೂಡಿ ಕಾಂಗ್ರೆಸ ಅಧ್ಯಕ್ಷರಾದ ಪಟ್ಟಾಭಿ, ಜನರಲ್ ಸೆಕ್ರೆಟರಿಗಳಾದ ಶ್ರೀ. ದೇವ ಶಂಕರರಾಯರನ್ನು ಭೆಟ್ಟಿಯಾಗಿದ್ದರು. ಹೊಸ ರಾಜ್ಯಘಟನೆಯಲ್ಲಿ ಕರ್ನಾಟಕ ಪ್ರಾಂತದ ನಾಮನಿರ್ದೇಶ ಮಾಡುವದರ ಅವಶ್ಯಕತೆಯನ್ನು ಅವರು ಪ್ರತಿಪಾದಿಸಿದರು. ಬೇಗನೆ ಕರ್ನಾಟಕ ಪ್ರಾಂತದ ನಿರ್ಮಾಣವಾಗದಿದ್ದರೆ ಕರ್ನಾಟಕದಲ್ಲಿ ನಿರಾಶೆಯಾಗುವದೆಂದೂ ಅವರು ಕಾಂಗ್ರೆಸ ವರಿಷ್ಠರಿಗೆ ಮನವರಿಕೆ ಮಾಡಿಕೊಟ್ಟರೆಂದು ತಿಳಿಯುತ್ತದೆ. ಈ ಹೊಸ ಪ್ರಾಂತಗಳ ರಚನೆಯನ್ನು ಕೂಡಲೆ ಕೈಕೊಳ್ಳಲು ಅವಕಾಶವೀಯುವ ವ್ಯವಸ್ಥೆಯನ್ನು ಸದ್ಯದ ಘಟನಾತ್ಮಕ ಕಾಯದೆಯಲ್ಲಿ ಸೇರಿಸಲಿಕ್ಕೆ ಬರುವದೋ ಹೇಗೆ ಎಂಬ ಬಗ್ಗೆ ಘಟನಾತಜ್ಞರ ಸಲಹೆಯನ್ನು ಪಡೆಯಲಾಗುವದಂತೆ. ಈ ಶಿಷ್ಟಮಂಡಲದವರು ೧೮ನೇ ತಾರೀಕಿನ ಸುಮಾರಿಗೆ ಕಾಂಗ್ರೆಸ ಕಾರ್ಯಸಮಿತಿಯನ್ನು ಕಾಣಲಿರುವರು. ಅಂದು ಶಿಷ್ಟಮಂಡಳದ ಸಭೆಯನ್ನು ಕರೆದಿದೆ. ಕಾರ್ಯಸಮಿತಿಯ ಮುಂದೆ ಪ್ರಾಂತೀಕರಣದ ತೀವ್ರ ಬೇಡಿಕೆಯನ್ನು ಪ್ರಾಂತೀಯ ಕಾಂಗ್ರೆಸ್ಸಿನ ಪರವಾಗಿ ಜೋರಿನಿಂದ ಪ್ರತಿಪಾದಿಸಲಾಗುವದಂತೆ. ಮೈಸೂರ ಮುಖ್ಯಮಂತ್ರಿಗಳಾದ ಶ್ರೀ ರೆಡ್ಡಿಯವರು ೧೫ ದಿನಗಳ ವರೆಗೆ ದಿಲ್ಲಿಯಲ್ಲಿ ಇದ್ದು ಬೆಂಗಳೂರಿಗೆ ಮರಳಿರುವರು. ಆಗಸ್ಟ ೪ ರಿಂದ ಮೈಸೂರು ಘಟನಾಸಮಿತಿಯ ಅಧಿವೇಶನವು ಪ್ರಾರಂಭವಾಗುವದು. ಆಗ ಘಟನೆಯ ಕರಡಿನ ಚರ್ಚೆ ನಡೆಯುವದು. ಕರಡಿಗೆ ಸೂಚಿಸಿದ ತಿದ್ದುಪಡಿಗಳನ್ನು ಚರ್ಚಿಸಿ ಸ್ವೀಕರಿಸಲಾಗುವದು. ಇದರಿಂದ ಸಂಸ್ಥಾನಗಳ ಘಟನೆಯನ್ನು ಹಿಂದೀ ಒಕ್ಕೂಟ ಘಟನೆಯಲ್ಲಿ ಸೇರಿಸಲನುವಾಗುವದು. ಕರಡುಸಮಿತಿಯ ಸೂಚನೆಗಳಿಗೆ ಘಟನಾಸಮಿತಿಯ ಸಮ್ಮತಿಯನ್ನು ಪಡೆಯುವದೇನೂ ಕಠಿನವಲ್ಲ ಎಂದು ಹೇಳಲಾಗುತ್ತದೆ. ಮೈಸೂರು ಮಂತ್ರಿಮಂಡಳದ ವಿಸ್ತಾರದ ಬಗ್ಗೆಯೂ ಖಾತೆಗಳನ್ನು ಹಂಚುವದರ ಸಂಬಂಧದಲ್ಲಿಯೂ ಮುಂದಿನ ವಾರ ಚರ್ಚೆ ನಡೆಯಲಿದೆಯೆಂದು ತಿಳಿಯುತ್ತದೆ.

# ಎಲ್ಲವನ್ನೂ ಒಮ್ಮೆಲೇ ಮಾಡುವ ಹವ್ಯಾಸ ಬೇಡ

## ಕಾಂಗ್ರೆಸ್ ಸರಕಾರಗಳು ಬೇಗನೆ ಫಲ ಕೊಡುವ ಯೋಜನೆಗಳನ್ನು ಮುಂದೊತ್ತಲಿ— ಬಂಡವಳಗಾರರನ್ನು ಸಂತೋಷ ಗೊಳಿಸುವ ಹುಚ್ಚು ಸಾಕು— ಸರಕಾರಕ್ಕೆ ಶ್ರೀ ಶಂಕರರಾವ ದೇವರ ಸೂಚನೆ

ಜನರು ಸರಕಾರದ ಎಲ್ಲ ತಪ್ಪುಗಳಿಗೂ ಕಾಂಗ್ರೆಸ್ಸೇ ಹೊಣೆಯೆಂದು ಬಗೆಯುವದು ಸರಿಯಲ್ಲ. ಕಾಂಗ್ರೆಸ್ ಸಂಸ್ಥೆಯನ್ನೂ ಸರಕಾರವನ್ನೂ ಪ್ರತ್ಯೇಕ ಪ್ರತ್ಯೇಕವೆಂದೇ ತಿಳಿದುಕೊಳ್ಳಬೇಕು. ಆದರೂ ಸರಕಾರದ ಧೋರಣೆಯೂ ಆಡಳಿತೆಯೂ ಪಕ್ಷದ ಹಣೆಬರೆಹವನ್ನು ನಿರ್ಣಯಿಸುವಲ್ಲಿ ತುಂಬ ಪರಿಣಾಮಕಾರಿಯಾಗುವಲ್ಲಿ ಸಂಶಯವಿಲ್ಲ. ಮುಂದಿನ ಚುನಾವಣೆಗಳಲ್ಲಿ ಕಾಂಗ್ರೆಸ್ಸಿನ ಜಯಾಪಜಯಗಳು ಸರಕಾರದ ಜನಪ್ರಿಯತೆಯನ್ನೇ ಅವಲಂಬಿಸಿವೆ. ಅದು ಸಂಸ್ಥೆಯ ಭವಿಷ್ಯತ್ತನ್ನು ಮೆರೆಸಬಹುದು ಅಥವಾ ಮುರಿಯಬಹುದು.

### ಆಶಾಭಂಗ

ನಿರಾಶಾಭಾವವೂ ಮನೋರಥಭಂಗದ ಅರಿವೆಯೂ ಜನರ ಹೃದಯವನ್ನಿಂದು ಆವರಿಸಿಬಿಟ್ಟಿವೆ. ಕಾಂಗ್ರೆಸ್ಸು ತನ್ನ ಪ್ರಚಾರದಿಂದ ಜನರ ಹೃದಯದಲ್ಲಿ ಉನ್ನತ ಆಶೋತ್ತರಗಳನ್ನು ಮೂಡಿಸಿತ್ತು. ಮೊದಲೇ ಅರೆ ಹೊಟ್ಟೆ ಅರೆ ಬತ್ತಲೆಗಳಿಂದ ದಿನ ನೂಕುತಿದ್ದ ಜನರ ಮೇಲೆ ಎರಡನೆ ಮಹಾಯುದ್ಧ ಬಂದೆರಗಿ ಅಳಿದುಳಿದ ನೆತ್ತರ ಹನಿಗಳನ್ನೂ ಹೀರಿ ಬಿಟ್ಟಿತು. ದಿನ ದಿನಕ್ಕೂ ಕ್ಲೇಶಗಳು ಹೆಚ್ಚುತಿದ್ದಾಗ ಕಾಂಗ್ರೆಸ್ಸು ತೋರಿಚ ದಾರಿಯೊಂದೇ ಉಳಿಗಾಲದ ಉಪಾಯವೆಂದೆಣಿಸಿ ಜನಸಾಮಾನ್ಯನು ಯಾವ ಬಲಿದಾನಕ್ಕೂ ಹಿಂಜರಿಯದೆ ಕಾಂಗ್ರೆಸ್ಸಿನ ಆದೇಶವನ್ನು ಪಾಲಿಸಿದನು. ಕಾಂಗ್ರೆಸ್ಸಿನ ಧ್ಯೇಯ ಕೈಗೂಡಿತೆಂದರೆ ತನಗೆ ದಿನಕ್ಕೆ ಎರಡೂಟಗಳಾದರೂ ದೊರೆಯುವವೆಂದು ಅವನು ನಂಬಿದ್ದನು.

ಆದರೆ ಕಾಂಗ್ರೆಸ್ ರಾಜ್ಯದಲ್ಲಿ ತನ್ನ ದುಃಖಗಳು ಇನ್ನಷ್ಟು ಹೆಚ್ಚಿದ್ದನ್ನು ಕಂಡು ಅವನಿಗಾದ ನಿರಾಶೆ ಅಷ್ಟಿಷ್ಟಲ್ಲ. ಯುದ್ಧ ಪೂರ್ವದ ಜೀವನ ಮಟ್ಟವನ್ನು ಕೂಡ ಕಾಯ್ದುಕೊಳ್ಳುವದು ಅವನಿಗೆ ತೀರ ಕಠಿನವೆನಿಸತೊಡಗಿದೆ. ಕೂಲಿಯ ದರಕ್ಕೂ ವೆಚ್ಚದ ಪ್ರಮಾಣಕ್ಕೂ ಇರುವ ಅಂತರಾಳವನ್ನು ಬಾಯಿಗೂಡಿಸಲು ಬೇಗನೇ ಪರಿಣಾಮಕರ ಉಪಾಯಗಳನ್ನು ಕೈಕೊಳ್ಳದೆ ಹೋದರೆ ನಿರಾಶರಾದ ಜನರು ಮಹತ್ವಾಕಾಂಕ್ಷಿಗಳಾದ ರಾಜಕಾರಣಿಗಳ ಕೈಗೊಂಬೆಗಳಾಗಿ ದೇಶದಲ್ಲಿ ಅನಾಯಕತೆಯುಂಟಾಗಲು ಎಡೆ ಮಾಡಿಕೊಡದಿರರು. ಮೊನ್ನೆ ಜನವರಿ–ಫೆಬ್ರುವರಿಗಳಲ್ಲಿ ಇಂಗ್ಲಂಡಿನಲ್ಲಿ ಜೀವನ ವೆಚ್ಚದ ಮಟ್ಟ ೧೦೪ ಅಂಶವಾಗಿದ್ದರೆ ಕೂಲಿಯ ಮಟ್ಟ ೧೦೮ ಆಗಿತ್ತೆಂಬುದು ಗಮನಾರ್ಹವಾಗಿದೆ. ಇಂಗ್ಲಂಡು ತನ್ನ ವ್ಯವಹಾರವನ್ನು ನಡೆಸುವ ರೀತಿ ಅನುಕರಣೀಯವಾಗಿದೆ.

### ಜನರ ನಿರೀಕ್ಷೆ

ಶುದ್ಧವಾದ ಗಾಳಿನೀರುಗಳು ಕೂಡ ಅವನಿಗಿಂದು ದುರ್ಲಭವಾಗಿವೆ. ಅವು ದೊರೆತ ಮೇಲೆ ಅವನಿಗೆ ಸಮುಧಾತುವಾದ ಪುಷ್ಟಿಕರ ಆಹಾರ, ಮೈತುಂಬ ಬಟ್ಟೆ, ಓರಣವಾದ ಮನೆ, ಸ್ವಚ್ಛವಾದ ನೆರೆಹೊರೆ, ಜೀವಿಕೆಯನ್ನು ಗಳಿಸಲು ಮತ್ತು ಸುತ್ತಮುತ್ತ ನಡೆಯುವುದನ್ನು ಅರಿತುಕೊಳ್ಳಲು ಇಂಬು ಮಾಡಿಕೊಡುವ ವಿದ್ಯೆ ಇವಿಷ್ಟು ಮುಖ್ಯ ಬೇಕಾಗಿವೆ. ಎಷ್ಟೋ ದಿನಗಳಿಂದ ಜನತೆ ಇವುಗಳಿಗಾಗಿ ಹಾತೊರೆದು ಕಾಯುತ್ತಿದೆ. ಆದರೆ ಆರಂಭದಿಂದಲೇ ಕಾಂಗ್ರೆಸ ಸರಕಾರಗಳು ಭಾರೀ ಸಮಸ್ಯೆಗಳನ್ನು ಎದುರಿಸಬೇಕಾಯಿತು. ನಮಗೆ ಸ್ವಾತಂತ್ರ್ಯ ದೊರೆತ ರೀತಿಯೂ ಸಂಧಿಯೂ ಇದಕ್ಕೆ ಮುಖ್ಯ ಕಾರಣವಾಗಿದ್ದವು. ಈ ಕಠಿನ ಸಮಸ್ಯೆಗಳನ್ನು ಬಗೆಹರಿಸುವದರ ಮೇಲೆಯೆ ನಮ್ಮ ಸ್ವಾತಂತ್ರ್ಯದ ಭದ್ರತೆ ನಿರ್ಭರವಾಗಿದ್ದುದರಿಂದ ಅವುಗಳನ್ನೇ ನಮ್ಮ ನಾಯಕರು ಮೊದಲು ಗಮನಿಸಬೇಕಾಯಿತು. ಆದರೆ ಇದರಿಂದ ಜನತೆಯ ಮೇಲಿನ ಹೊರೆ ಇನ್ನಷ್ಟು ಭಾರವಾಯಿತು. ಅದರೂ ಜನತೆ ಮುಂದಾಳುಗಳ ಕಾರ್ಯವನ್ನು ಚನ್ನಾಗಿ ಅಭಿನಂದಿಸಿದೆ.

ಅದರೆ, ಸ್ವಾತಂತ್ರ್ಯ ದೊರೆತು ಎರಡು ವರ್ಷಗಳಾಗುತ್ತ ಬಂದಿರುವಾಗ ಇನ್ನಾದರೂ ತಮ್ಮ ಕಷ್ಟನಿಷ್ಠುರಗಳತ್ತ ಸರಕಾರದ ಗಮನ ಹರಿಯಬೇಕೆಂದು ಜನರು ನಿರೀಕ್ಷಿಸಿದರೆ ಅದು ನ್ಯಾಯವೇ ಸರಿ.

ಜನರ ಪೀಡಾಪರಿಹಾರಕ್ಕೆ ಸರಕಾರ ಎನೂ ಮಾಡಿಲ್ಲವೆಂದಲ್ಲ. ಎಷ್ಟೋ ಯೋಜನೆಗಳನ್ನು ಯೋಜಿಸಲಾಗಿದೆ. ಅವುಗಳ ಮೇಲೆ ಕೋಟ್ಯಂತರ ರೂಪಾಯಿಗಳನ್ನು ವೆಚ್ಚ ಮಾಡಲಾಗಿದೆ. ಆದರೆ ಅವು ಅಷ್ಟು ಜಯಶೀಲವಾಗಿಲ್ಲೆಂದು ಒಪ್ಪದೆ ವಿಧಿಯಿಲ್ಲ. ಇದಕ್ಕೆ ಜನತೆಯ ಇದೀಗಿನ ಸಮಸ್ಯೆಗಳನ್ನೂ ಅವಶ್ಯಕತೆಗಳನ್ನೂ ಸರಿಯಾಗಿ ಅರಿತುಕೊಳ್ಳಲು ತಪ್ಪಿದ್ದೂ ಒಂದು ಕಾರಣವೆಂದು ನನ್ನ ಅಭಿಪ್ರಾಯ. ಮೊದಲನೆಯದಾಗಿ ನಾವು ಎಲ್ಲವನ್ನೂ ಒಮ್ಮೆಲೇ, ಅದೂ ಬಹಳ ವಿಸ್ತಾರವಾದ ಕ್ಷೇತ್ರದಲ್ಲಿ, ಮಾಡಿಬಿಡಲು ಪ್ರಯತ್ನಿಸುತ್ತಿದ್ದೇವೆ. ಎರಡನೆಯದಾಗಿ, ನಾವು ದೂರ ಭವಿಷ್ಯತ್ತಿನ ಮೇಲೆ ದೃಷ್ಟಿಯಿಟ್ಟು ಸಾಗುವಾಗ ವರ್ತಮಾನದ ಅವಶ್ಯಕತೆಯನ್ನು ದುರ್ಲಕ್ಷಿಸಿದ್ದೇವೆ.

### ಪರಾವಲಂಬನೆ ಬೇಡ

ನಮ್ಮ ಯೋಜನೆಗಳಲ್ಲಿ ನಾವು ನಮ್ಮನ್ನೇ ಅವಲಂಬಿಸಿಕೊಳ್ಳದೆ ಪರಾವಲಂಬನೆಗೆ ಬಿದ್ದಿರುವದು ಇನ್ನೊಂದು ತಪ್ಪೆಂದು ನನ್ನೆಣಿಕೆ. ನಮ್ಮ ಕಲ್ಪನಾರಾಜ್ಯವನ್ನು ಕಟ್ಟಲು ಪರದೇಶಗಳ ಧನಶಕ್ತಿಯನ್ನು ಮಾತ್ರವಲ್ಲ, ಜನಶಕ್ತಿಯನ್ನು ಕೂಡ ನಂಬುತ್ತಿದ್ದೇವೆ. ಇಂದಿನ ಜಗತ್ತಿನಲ್ಲಿ ಪರಸ್ಪರಾವಲಂಬನೆಯಿಲ್ಲದೆ ಪೂರ್ತಿ ಸ್ವಾತಂತ್ರ್ಯಕ್ಕೆಡೆಯಿಲ್ಲವೇನೋ ನಿಜ. ಅದರೆ ಪರಸ್ಪರಾವಲಂಬನೆಯನ್ನು ಪರಾವಲಂಬನೆಯೆಂದು ತಿಳಿದುಕೊಂಡರೆ ಅದು ದೊಡ್ಡ ತಪ್ಪೇ ಸರಿ. ಪರಸ್ಪರಾವಲಂಬನೆ ಸಾಧ್ಯವಾಗಬೇಕಾದರೆ ನಾವು ಯಾವುದಾದರೊಂದು ವಿಷಯದಲ್ಲಿ ಪ್ರಬಲರಾಗಿರಬೇಕು. ಅನಂತ ಕಾಲದ ವರೆಗೆ ಐಹಿಕ ಸಾಮುಗ್ರಿಗಳನ್ನು ಹೊರಗಿನಿಂದಲೇ ತರಿಸುತ್ತ ಬರಿ ಆಧ್ಯಾತ್ಮಿಕ ಸರಕನ್ನು ಮಾತ್ರ ಹೊರಗೆ ಕಳಿಸುತ್ತ ಕುಳಿತರೆ ನಮಗೆ ಉಳಿಗಾಲವಿಲ್ಲ! ನಾವು ಹೆಚ್ಚು ವ್ಯವಹಾರವಿದರೂ ಕಡಿಮೆ ಸ್ವಪ್ನಬ್ರಹ್ಮರೂ ಅಗಬೇಕು. ಕನಸು ಕಾಣಲೇ ಬಾರದೆಂದಲ್ಲ. ಆದರೆ ಆ ಕನಸು ವಿವೇಕದ ಅಳವಿನಲ್ಲಿರಬೇಕು. ಕೋಟ್ಯಂತರ ಪ್ರಜೆಗಳಿಗಾಗಿ ಸುಖಸಾಮ್ರಾಜ್ಯವನ್ನು ಕಟ್ಟುವ ಯೋಜನೆಗಳನ್ನು ನಾವು ಮಾಡಿರುವೆವಾದರೂ ಅವುಗಳಲ್ಲಿ ಹೆಚ್ಚಿನವು ಫಲಿಸಬೇಕಾದರೆ ಐದು-ಹತ್ತು ವರ್ಷಗಳು ಬೇಕಾಗುವವು. ಇದು ಕೂಡ ಕಾಗದದ ಗುಣಕಾರ. ಪ್ರತ್ಯಕ್ಷ ಕಾರ್ಯರಂಗದಲ್ಲಿ ಇಂಥ ಹಂಚಿಕೆಗಳ ವೆಚ್ಚ ಬೆಳೆಯುತ್ತಲೂ ಸಮಯ ವಿಲಂಬಿಸುತ್ತಲೂ ಹೋಗುವದು ಅನುಭವಕ್ಕೆ ಬಂದ ಮಾತು. ಇವುಗಳಿಂದ ಅನೇಕ ಅಂತರ್‌ರಾಷ್ಟ್ರೀಯ ತೊಡಕುಗಳು ಉತ್ಪನ್ನವಾಗಿ ನಮ್ಮ ಕೈಮೀರುವ ಸ್ಥಿತಿ ಬಂದು ಅವುಗಳನ್ನು ಬಿಟ್ಟೇಬಿಡುವ ಪ್ರಸಂಗವೂ ಬರಬಹುದು. ಅಲ್ಲದೆ ಅವುಗಳು ನಮ್ಮ ಕೋಟ್ಯಂತರ ಪ್ರಜೆಗಳಿಗೆ ಜೀವನೋಪಾಯವನ್ನೊದಗಿಸಲು ಅಸಮರ್ಥವಾಗುವ ಭಯವೂ ಉಂಟು. ಕೊನೆಗೆ ಇದರಿಂದ ಆಶಾಭಂಗವುಂಟಾಗಿ ಅಳವಾದ ಅಸಂತೋಷ ಹಬ್ಬಲು ಕೂಡ ಅವಕಾಶವಾಗಬಹುದು.

### ಅತಿ ಮಹತ್ವಾಕಾಂಕ್ಷೆ ಸಾಕು

ಆದ್ದರಿಂದ ನಾವು ಹಾಸಿಗೆಯಿದ್ದಷ್ಟೇ ಕಾಲು ಚಾಚೋಣ. ಸದ್ಯಕ್ಕೆ ನಮ್ಮ ಉತ್ಪಾದನ ಯೋಜನೆಗಳನ್ನು ನಮ್ಮ ಜನಧನಶಕ್ತಿಗೆ ನಿಲುಕುವಷ್ಟಕ್ಕೇ ಮಿತವಾಗಿರಿಸೋಣ. ನಮ್ಮ ಜನಶಕ್ತಿ ಅಪಾರವಾಗಿದ್ದರೂ ತಜ್ಞರೂ ತಂತ್ರಜ್ಞರೂ ನಮ್ಮಲ್ಲಿ ತೀರ ಕಡಿಮೆ. ನಮ್ಮ ಭಾವೀ ಐಹಿಕ ಸಂಪತ್ತಿ ಅಪರಿಮಿತವಾಗಿದ್ದರೂ ಸದ್ಯಕ್ಕೆ ದೊರೆಯಬಹುದಾದ ಬಂಡವಳ ಕಡಿಮೆ. ಅದ ಕಾರಣ ನಾವು ಅತಿ ಮಹತ್ವಾಕಾಂಕ್ಷಿಗಳಾಗೋಣ ಬೇಡ. ಔದ್ಯೋಗಿಕ ಪ್ರಗತಿಯನ್ನು ಸಂಪಾದಿಸಿ ಪ್ರಬಲ ರಾಷ್ಟ್ರಗಳ ಮಾಲಿಕೆಯಲ್ಲಿ ಸೇರುವ ಹಂಬಲದಲ್ಲಿ, ನಿಂತ ನೆಲದಲ್ಲಿ ಜಾರಿಬೀಳದೆ ಇರೋಣ. ಚಿಕ್ಕಪುಟ್ಟ ಸಂಗತಿಗಳಿಂದ ತೊಡಗಿ ಮಹಾ ಸಾಹಸಗಳಲ್ಲಿ ಪರ್ಯವಸಾನ ಮಾಡೋಣ. ಜನರಿಗೆ ಮೊದಲು ಸಾಕಷ್ಟು ಅನ್ನವಸ್ತ್ರ ವಸತಿಗಳು ದೊರಕಲಿ. ವೈಭವದ ವಸ್ತುಗಳು ಆ ಮೇಲೆ ದೊರೆತರೆ ಸಾಕು. ಸ್ವಪ್ರಯತ್ನದಿಂದಲೇ ಉತ್ಕರ್ಷ ಸಾಧ್ಯವೆಂದು ಸ್ವಂತ ಮೇಲ್ಪಂಕ್ತಿಯಿಂದ ಜನರಿಗೆ ಕಲಿಸೋಣ. ಸ್ವರಾಜ್ಯವೆಂದರೆ ಹೊರಗಿನ ಶೋಷಣೆಯ ದೂರೀಕರಣ ಮಾತ್ರ; ಅಭ್ಯೋನ್ನತಿಗೆ ಸ್ವತಃ ಶ್ರಮವೊಂದೇ ಸಾಧನವೆಂದು ಜನರಿಗೆ ಚನ್ನಾಗಿ ತಿಳಿಯಲಿ.

ಜಯಪುರ ಗೊತ್ತುವಳಿಯಲ್ಲಾದರೂ ಆಹಾರ ಮತ್ತು ವಿದ್ಯುಚ್ಛಕ್ತಿಯ ಅವಶ್ಯಕತೆಗಳನ್ನು ಪೂರೈಸಲು ದೊಡ್ಡ ದೊಡ್ಡ ಯೋಜನೆಗಳು ಅವಶ್ಯವಾಗಿದ್ದರೂ ಬೇಗನೆ ಫಲಿತಕ್ಕೆ ಬರುವ ಚಿಕ್ಕಪುಟ್ಟ ಉದ್ಯಮಗಳಿಗೆ, ಮುಖ್ಯವಾಗಿ ಸಹಕಾರಿ ಪದ್ಧತಿಯ ಮೇಲೆ ನಡೆಯುವವುಗಳಿಗೆ, ಉತ್ತೇಜನ ಕೊಡಬೇಕೆಂದು ಹೇಳಲಾಗಿದೆ. ಈ ವಿಕೇಂದ್ರಿಕೃತ ಉತ್ಪಾದನವೇ ರಾಷ್ಟ್ರದ ಶಾಶ್ವತ ಆರ್ಥಿಕ ಧೋರಣೆಯಲ್ಲಿ ಅಂತರ್ಗತವಾಗಬೇಕೆಂದೂ ಸೂಚಿಸಲಾಗಿದೆ. ಗೊತ್ತುವಳಿಯ ಈ ಭಾಗವನ್ನು ಹೃತ್ಪೂರ್ವಕವಾಗಿ, ಬಿರುಸಾಗಿ ಆಚರಣೆಗೆ ತಂದು ಈ ಔದ್ಯೋಗಿಕ ಅಂಗಕ್ಕೆ ಈಗ ಕೊಡುತ್ತಿರುವ ಮಲತಾಯಿ ಪ್ರೇಮವನ್ನು ಬದಲಿಸಿದರೆ ಜನತೆಯಲ್ಲಿರುವ ಕಾರ್ಯಸ್ಫೂರ್ತಿಗೆ ಉತ್ತೇಜನ ದೊರೆತು ರಾಷ್ಟ್ರದ ಸುಪ್ತಶಕ್ತಿ ಜಾಗೃತವಾಗದಿರದು. "ಲಜ್ಜೆ" ಯಿಂದ ಮರೆಸೇರಿರುವ ಬಂಡವಳವನ್ನು ಒಲಿಸಲು ಜನಸಾಮಾನ್ಯದ ಕಿಸೆ ಕತ್ತರಿಸಿ ಅದಕ್ಕೆ ಸವಲತ್ತು ಕೊಡುವ ಪ್ರಸಂಗವೂ ಬರಲಾರದು.

### ಹೆಚ್ಚು ದುಡಿದು ಕಡಿಮೆ ಬಳಸಿರಿ

ಆದರೆ ಈ ಯೋಜನೆಯನ್ನೇ ಅಂಗೀಕರಿಸಿದರೂ ಆದರ ಫಲಗಳು ತೋರಿ ಬರಲು ಕೆಲ ಕಾಲ ಬೇಕು. ಈ ನಡುವೆ "ಹೆಚ್ಚಿಗೆ ಉತ್ಪಾದಿಸಿ ಕಡಿಮೆ ಉಪಭೋಗಿಸಿರಿ" ಎಂದು ನಮ್ಮ ಕರೆಯಿರಬೇಕು. ರಾಷ್ಟ್ರಕ್ಕೆ ರಾಷ್ಟ್ರವೇ ಮಿತವ್ಯಯ, ಮಿತ ಭೋಜನದ ವ್ರತವನ್ನು ಆಚರಿಸಬೇಕು. ಈ ಸಂಬಂಧದಲ್ಲಿ ಮೇಲ್ಪಂಕ್ತಿ ಹಾಕಿ ಕೊಡಲು ನಮ್ಮ ಮುಂದಾಳುಗಳು ತಮ್ಮ ಸತ್ಕಾರ ಕೂಟ ಭೋಜನ ಸಮಾರಂಭಗಳನ್ನು ನಿಲ್ಲಿಸಬೇಕು. ಇವುಗಳಿಂದ ಜನರಲ್ಲಿ ಅನವಶ್ಯಕವಾಗಿ ತಪ್ಪು ತಿಳಿವಳಿಕೆಯುಂಟಾಗಿ ಮುಂದೆ ಸಮಾಧಾನ ಹೇಳುವ ಪ್ರಸಂಗ ಬರುತ್ತದೆ. ತ್ಯಾಗದಲ್ಲಿ ಸರ್ವಸಮಾನತೆಯಿಲ್ಲದಿದ್ದರೆ ಜನರಲ್ಲಿ ತ್ಯಾಗದ ಹುರುಪು ಬರಲಾರದು. ಎಲ್ಲ ವರ್ಗಗಳೂ ಸರಿಯಾಗಿ ಹಂಚಿಕೊಂಡು ಈ ಭಾರ ಹೊರಬೇಕು.

ಈಗಂತೂ ತಾವು ಹಸಿದಿರುವಾಗ ಉಳ್ಳವರು ಮೃಷ್ಟಾನ್ನ ಭೋಜನ ಮಾಡುತಿದ್ದಾರೆಂದು ಜನ ಭಾವಿಸಿದೆ. ಕಾಂಗ್ರೆಸ್ ರಾಜ್ಯದಲ್ಲಿಯೂ ಬಡವರನ್ನು ಕತ್ತರಿಸಿ ಶ್ರೀಮಂತರಿಗೇ ಪಕ್ಷಪಾತ ತೋರಿಸಲಾಗುತಿದೆಯೆಂದು ಜನರಲ್ಲಿ ನ್ಯಾಯವಾದ ಅಸಂತೋಷವುಂಟಾಗಿದೆ. ಬಡವರ ಮೇಲೆಯೆ ಬೀಳುವ ಅಪ್ರತ್ಯಕ್ಷ ಕರಗಳ ಮೇಲೆ ಸರಕಾರ ಹೆಚ್ಚು ಹೆಚ್ಚು ಅವಲಂಬಿಸತೊಡಗಿದೆ. ಅದೂ ಸದ್ಯದ ವೆಚ್ಚಗಳನ್ನು ತೀರಿಸಲಿಕ್ಕಿರದೆ ಶ್ರೀಮಂತರಿಗೆ ಕರ ಸೂಟು ಬಿಡಲಿಕ್ಕೆ. ಸರಕಾರ ಹೀಗೆ ಓಲೈಕೆಯ ಧೋರಣ ವಹಿಸುತ್ತಿರುವಾಗ ಬಂಡವಳಗಾರರು ಸಿಡುಕಿನ ಧೋರಣವನ್ನು ಅನುಸರಿಸುತಿದ್ದಾರೆ. ಮುಖ್ಯಮಂತ್ರಿ ನೆಹರೂ ಅವರು ಈ ಅದೂರದರ್ಶಿ ಧೋರಣೆಯಬಗ್ಗೆ ಬೇಸರವ್ಯಕ್ತಗೊಳಿಸಿದ್ದಾರೆ. ಬಂಡವಳಗಾರರು ಇದೇ ಧೋರಣ ಮುಂದುವರಿಸಿದರೆ ಅವರನ್ನು ಬಲಾತ್ಕರಿಸಲು ಸರಕಾರ ಸಿದ್ಧವಾಗಿದೆಯೆ? ಕೂಲಿಕಾರರಿಗೆ ಬೋನಸ್ ಕೊಡುವಾಗ ಒಂದಂಶವನ್ನು ಸರಕಾರದ ಉಳಿತಾಯ ಪತ್ರಗಳಲ್ಲಿ ತೊಡಗಿಸುವಂತೆ ನಿರ್ಬಂಧಿಸುವ ಸುಗ್ರೀವಾಜ್ಞೆ ಹೊರಡಿಸಿದ್ದು ಯೋಗ್ಯವೇ. ಆದರೆ ಅ. ಭಾ. ಕಾಂಗ್ರೆಸ್ಸಿನ ಅವಿರೋಧ ಗೊತ್ತುವಳಿ ಮತ್ತು ಕಾಂಗ್ರೆಸ್ ಶಾಸನಸಭಾ ಪಕ್ಷದ ಸಮಿತಿಯ ಸಲಹೆ ಇದ್ದರೂ ಉತ್ಪನ್ನದ ಶಾರತಮ್ಯಾನುಸಾರವಾಗಿ ಹಣವಂತರಿಂದ ಒತ್ತಾಯದ ಉಳಿತಾಯ ಯೋಜನೆಯನ್ನು ಸರಕಾರ ಜಾರಿಗೆ ತರದಾಗಿದೆ. ಈ ಪಕ್ಷಪಾತ ಧೋರಣೆಯ ಬಗ್ಗೆ ಜನರಿಗೆ ಸಮಾಧಾನ ಹೇಳುವದು ಕಠಿಣವಾಗಿದೆ.

### ಆಹಾರ ಯುದ್ಧದಲ್ಲಿ ಜಯ ದೊರೆಯುವ ಉಪಾಯ

ಇಂದು ಆಹಾರ ಪ್ರಶ್ನೆ ನಮ್ಮ ಜೀವ ಸಾವಿನ ಪ್ರಶ್ನೆಯಾಗಿಬಿಟ್ಟಿದೆ. ಈ ವಿಷಯದಲ್ಲಿ ಜನರು ಕಾಂಗ್ರೆಸ್ಸಿನೊಡನೆ ಜಟಿಕೊಟ್ಟು ಸಹಕರಿಸಬೇಕೆಂದು ಗವರ್ನರ ಜನರಲ್ಲರು ಹೇಳಿದ್ದಾರೆ. ಉಪವಾಸದ ವಿರುದ್ಧ ನಡೆದ ಈ ಯುದ್ಧದಲ್ಲಿ ಪ್ರತಿಯೊಬ್ಬ ನಾಗರಿಕನೂ ಸೈನಿಕನಂತೆ ಹೋರಾಡಬೇಕೆಂದು ಮುಖ್ಯ ಮಂತ್ರಿಗಳು ಬಿನ್ನವಿಸಿಕೊಂಡಿದ್ದಾರೆ. ಇದರ ಅರ್ಥವೇನು? ಉಳಿದೆಲ್ಲ ವಿಷಯಗಳನ್ನು ಗೌಣವಾಗಿ ಮಾಡಿ ರಾಷ್ಟ್ರದ ಸರ್ವಶಕ್ತಿಯನ್ನು ಈ ಹೋರಾಟದಲ್ಲಿ ಜಯ ದೊರಕಿಸುವತ್ತ ಪ್ರೇರಿತವಾಗುವದೆಂದು ಮೊದಲನೆ ಅರ್ಥ.

ಯಾವುದೊಂದು ಯುದ್ಧದಲ್ಲಿ ಜಯ ಸೈನಿಕರನ್ನೇ ಅವಲಂಬಿಸಿದೆ. ಅವನಿಗೆ ಯೋಗ್ಯ ಆಹಾರ ವಸ್ತುಗಳೂ ಸರಿಯಾದ ಅಸ್ತ್ರಶಸ್ತ್ರ ಸಾಮುಗ್ರಿಗಳೂ ದೊರೆಯುವದು ಅತ್ಯವಶ್ಯ. ತಾನು ತೊಡಗಿರುವ ಕಾರ್ಯದ ಬಗ್ಗೆ ಅಭಿಮಾನವೂ ತನ್ನ ಸೇನಾನಿಯ ಮೇಲೆ ವಿಶ್ವಾಸವೂ ಸೈನಿಕನಲ್ಲಿರಬೇಕಾಗಿದೆ. ಹಾಗಾದರೆ ಮಾತ್ರ ಅವನು ತನ್ನ ಬಾಂಧವರಿಗಾಗಿ ಜೀವ ತೆರಲು ಸಿದ್ಧನಾದಾನು. ಆಹಾರ ಯುದ್ಧರಂಗದಲ್ಲಿ ರೈತನೇ ಸೈನಿಕ. ಅವನನ್ನು ಹಾಗೆಯೆ ನಡೆಸಿಕೊಳ್ಳಬೇಕು. ಅವನ ನೆಮ್ಮದಿಯೆ ನಮ್ಮ ಪ್ರಥಮ ಲಕ್ಷ್ಯವಾಗಿರಬೇಕು.

ಆದರೆ ಇಂದು ರೈತನು ಉತ್ಪಾದಿಸುತ್ತಿರುವ ಭೂಮಿ ಸಾಮಾನ್ಯತಃ ಅವನದಲ್ಲ. ಅವನು ಬರಿ ಕೂಲಿಯಾಳಿನಂತಿದ್ದಾನೆ. ಭೂಮಿಯು ಒಡೆತನ ಸಾಗುವಳಿ ಮಾಡದವರ ಕೈಸೇರಿದೆ. ಭೂಮಿಯನ್ನು ಯೋಗ್ಯರೀತಿಯಲ್ಲಿ ಹಂಚಿಹಾಕದೇ ಆಹಾರ ರಂಗದಲ್ಲಿ ಗೆಲವು ಅಸಾಧ್ಯವೆಂದರೂ ಅತಿಶಯೋಕ್ತಿಯಾಗದು. ನಾವು ಜಮೀನ್ದಾರಿ ಪದ್ಧತಿಯನ್ನು ರದ್ದುಗೊಳಿಸುತಿದ್ದೇವೆ. ಇದರ ಬೆನ್ನಿಗೇ ಇನ್ನೊಂದು ಕ್ರಾಂತಿಕಾರಿ ಹೆಜ್ಜೆಯನ್ನಿಟ್ಟು ಭೂಮಿ ನಿಜವಾದ ಸಾಗುವಳಿದಾರನಿಗೇ ಸೇರಿರತಕ್ಕದ್ದೆಂಬ ತತ್ವವನ್ನು ಆಚರಣೆಗೆ ತರತಕ್ಕದ್ದು. ರೈತರಲ್ಲಿ ಕಮ್ಯುನಿಸ್ಟರ ಪ್ರಭಾವವನ್ನು ಕುಗ್ಗಿಸಲು ಇದು ನೆರವಾಗುವದು.

ಆಹಾರದ ನಂತರ ವಸ್ತ್ರದ ಕೊರತೆಯ ಪ್ರಶ್ನೆ ಬರುತ್ತದೆ. ಆಗ ಭೂಮಿಯಲ್ಲಿ ದುಡಿಯುವವನ ಸಂಗಡ ಕಾರಖಾನೆಯ ಕೂಲಿಕಾರದ ಯೋಗಕ್ಷೇಮವನ್ನು ವಿಚಾರಿಸಬೇಕಾಗುತ್ತದೆ. ಈ ಮೊದಲೇ ಹೇಳಿದಂತೆ ಸರಕಾರದ ಕರಧೋರಣೆಯಿಂದ ಬಡವರ ಮೇಲೆಯೆ ಭಾರಬೀಳುತಿದೆ. ಈ ಧೋರಣೆಯನ್ನು ಸದುದ್ದೇಶದಿಂದಲೇ ಸರಕಾರದವರು ಅಂಗೀಕರಿಸಿದ್ದರೂ ಅದು ಶ್ರೀಮಂತರನ್ನು ಸಂತೋಷಗೊಳಿಸದೆ ಕೂಲಿಕಾರರನ್ನು ಮಾತ್ರ ವಿಮುಖನನ್ನಾಗಿ ಮಾಡಿದೆ. ನಾವು ಇದನ್ನೆಲ್ಲ ಚಿಂತಿಸಿ ಹೊಲದಲ್ಲಿಯೂ ಕಾರಖಾನೆಯಲ್ಲಿಯೂ ನಿಜವಾಗಿ ಪ್ರತ್ಯುತ್ಪಾದಕನಾದವನಿಗೆ ಹಿತಾವಹವಾದಕ್ರಮ ಕೈಕೊಳ್ಳುವದು ಯೋಗ್ಯ.

ಇಂದಿನ ಕಾಲದಲ್ಲಿ ಸರಕಾರಗಳ ಆರ್ಥಿಕ ನೀತಿಯೇ ಅವುಗಳ ಭವಿಷ್ಯವನ್ನು ನಿರ್ಣಯಿಸುತ್ತವೆ. ಜನರ ಮನಸ್ಸಿನಲ್ಲಿ, ಅದೂ ಬಡವರಲ್ಲಿ ಮತ್ತು ಯುವಕರಲ್ಲಿ, ನಾವು ಅತಿ ಸಂಪ್ರದಾಯಶರಣತೆಯನ್ನು ಆಶ್ರಯಿಸಿದ್ದೇವೆಂಬ ಸಂಶಯಕ್ಕೆ ಆಸ್ಪದವಿತ್ತಿದ್ದೇವೆ. ನಾವು ಮಧ್ಯ ಮಾರ್ಗವನ್ನವಲಂಬಿಸಿದ್ದೇವೆಂಬುದು ನಿಜ. ಶಾಂತ ಪ್ರಜಾತಂತ್ರಾತ್ಮಕ ರೀತಿಯಲ್ಲಿ ಧ್ಯೇಯವನ್ನು ಮುಟ್ಟಬೇಕೆಂದಿರುವ ನಮಗೆ ಇದೇ ವಿವೇಕಯುಕ್ತ ಉಪಾಯ. ಆದರೂ ನಾವು ನಮ್ಮ ಚರಮ ಧ್ಯೇಯದ– ಅಂದರೆ ವರ್ಗರಹಿತ ಸಮಾಜ ಸ್ಥಾಪನೆಯ ವಿಷಯದಲ್ಲಿ ಯಾರೂ ಶಂಕಿತರಾಗದಂತೆ ನೋಡಿಕೊಳ್ಳುವುದು ಅವಶ್ಯವಾಗಿದೆ. ಕಾಂಗ್ರೆಸ್ಸಿನ ಕಾಯಕಲ್ಪ. ಇದರಲ್ಲಿ ಹೊಸ ನೆತ್ತರವನ್ನು ತುಂಬಿಸುವದೇ ಮೊದಲಾದ ಉಪಾಯಗಳನ್ನು ನಾವು ಅರಿತಿದ್ದೇವೆ. ಇದು ಕೈಗೂಡಬೇಕಾದರೆ ಕಾಂಗ್ರೆಸ್ಸಿನ ಧೋರಣೆ ದೇಶದ ಅತಿ ಬುದ್ಧಿಶಾಲಿ ಮತ್ತು ದೇಶಪ್ರೇಮಿ ಯುವಕರ ಮನಸಿಗೆ ಮೆಚ್ಚುವಂತಿರಬೇಕು. ನಮ್ಮ ಧೋರಣೆಯೂ ಕಾರ್ಯಕ್ರಮವೂ ಜನತೆಯಲ್ಲಿ ವಿಧೇಯತೆಯನ್ನು ಹುರುಪನ್ನು ಜಾಗರಿಸುವಂತಿರಬೇಕು. ಪ್ರಜಾತಂತ್ರದಲ್ಲಿ ಜನರ ಪ್ರೇಮ ವಿಶ್ವಾಸಗಳಿರುವ ಪಕ್ಷಕ್ಕೆ ಮಾತ್ರ ವಿಜಯ ದೊರೆಯುವ ಆಶೆಯಿದೆ.

**ವಿಚಾರ ದ್ವಂದ್ವ**

# ಗುಣಕರ್ಮಸ್ವಭಾವಗಳಿಂದಲೇ ವರ್ಣವೆ?

ಕಳೆದ ೯—೩—೪೯ ನೇ "ಕರ್ಮವೀರ"ದ ವಿಚಾರದ್ವಂದ್ವದಲ್ಲಿ ಶಂ। ಸುಧಾಕರರು "ಜನ್ಮದಿಂದಲೇ ವರ್ಣ"ವಲ್ಲವೆಂದುಸಿದ್ಧಾಂತ ಮಾಡಲಿಕ್ಕೆ ಹೊರಟಿದ್ದಾರೆ. ಅದರ ೨೦-೩-೪೯ ನೇ "ಕರ್ಮವೀರ"ದಲ್ಲಿ ನಾನು ಬರೆದ ಜನ್ಮದಿಂದಲೇ ವರ್ಣ ಎಂಬ ಲೇಖನವನ್ನೋದಿದವರಿಗೆಲ್ಲ ಈ ಚಾತುರ್ವರ್ಣ್ಯ ವ್ಯವಸ್ಥೆಯು ಕೇವಲ ಸ್ಥೂಲ ಸ್ವರೂಪದಿಂದ ಸಮಾಜದಲ್ಲಿ ಮಾತ್ರವಲ್ಲ; ಪ್ರತಿಯೊಬ್ಬ ವ್ಯಕ್ತಿಯಲ್ಲೂ ಈ ನಾಲ್ಕೂ ವರ್ಣಗಳ ವೃತ್ತಿಯೂ ಸಹಜಸಿದ್ಧವಾಗಿದೆಯೆಂಬಂಶ ತಿಳಿದಿರಲಿಕ್ಕೆ ಸಾಕು. ಪ್ರಕೃತ ಶ್ರೀಯುತರ ಆಕ್ಷೇಪಗಳಿಗೆ ನನ್ನ ಪರಿಮಿತ ಬುದ್ಧಿಗೆ ಸೂಚಿತವಾದಷ್ಟು ಸಮಾಧಾನ ಹೇಳಲು ಯತ್ನಿಸುತ್ತಿದ್ದೇನೆ.

## ಮನುವಿನ ಮಾತು

ಮನು ಮಹಾರಾಜನು ವರ್ಣ ಜನ್ಮದಿಂದ ಬಾರದೆ,ಯೋಗ್ಯತೆಯಿಂದಲೇ ಬರುತ್ತದೆಂದು ಸಾರಿದ್ದಾನೆಂ" ಹೇಳುವ ಶ್ರೀ। ಸುಧಾಕರರ ಮನುಸ್ಮೃತಿಯಲ್ಲಿ ಬಹುಶಃ ಈ ಕೆಳಗಿನ ಶ್ಲೋಕಗಳಿರಬಹುದೆ? "ಶರ್ಮವದ್ಬ್ರಾಹ್ಮಣಸ್ಯ ಸ್ಯಾದ್ರಾಜ್ಞೋ ರಕ್ಷಾಸಮನ್ವಿತಂ। ವೈಶ್ಯಸ್ಯ ಪುಷ್ಟಿಸಂಯುಕ್ತಂ ಶೂದ್ರಸ್ಯ ಪ್ರೇಷ್ಯಸಂಯುತಂ॥" (ಮನು ೨-೩೨) ಅಂದರೆ ಹುಟ್ಟಿದ ಕೂಸಿಗೆ ಹನ್ನೆರಡು ಅಥವಾ ಹತ್ತನೇ ದಿನ ನಾಮಕರಣ ಮಾಡುವಾಗ ಬ್ರಾಹ್ಮಣನಿಗೆ 'ಶರ್ಮ' ವಾಚಕ ಉಪಪದವಾಗಿಯೂ ಕ್ಷತ್ರಿಯನಿಗೆ "ರಕ್ಷಾ ವಾಚಕ ಉಪಪದವಾಗಿಯೂ..." ಇತ್ಯಾದಿ ಹೆಸರಿಡಬೇಕೆಂಬ ಮನುವಿನ ವಚನದಲ್ಲಿ ೧೦-೧೨ ದಿನದ ಶಿಶುವಿನ ಜಾತಿಯಲ್ಲಿ ಯಾವ ಗುಣಕರ್ಮ ಸ್ವಭಾವಗಳ ಮೇಲೆ ನಿರ್ಣಯಿಸಬೇಕೆಂಬುದೂ "ಬಾಬಾಕಥಿತ ಪ್ರಮಾಣವಾದಿಗಳಾದ" ನಮ್ಮ "ಘಾತಕ ಬುದ್ಧಿ"ಗೆ ತೋಚುವಂತಿಲ್ಲ. ಮತ್ತು "ವರಂ ಸ್ವಧರ್ಮೋ ವಿಗುಣೋ ನ ಪಾರಕ್ಯಃ ಸ್ವನುಷ್ಠಿತಃ। ಪರಧರ್ಮೇಣ ಜೀವನ್ ಹಿ ಸದ್ಯಃ ಪತತಿ ಜಾತಿತಃ॥" (ಮನು ೧೦-೯೭) 'ತನ್ನ ಧರ್ಮವು ಗುಣಹೀನವಾಗಿ ಕಂಡರೂ ಅದನ್ನು ತ್ಯಜಿಸಿ ಪರಧರ್ಮವನ್ನು ಆಶ್ರಯಿಸಬಾರದು. ಹಾಗೆ ಮಾಡಿದರೆ ಜಾತಿಭ್ರಷ್ಟನಾಗುತ್ತಾನೆ' ಎಂಬ ಈ ಮನುವಿನ ಉಕ್ತಿಯಲ್ಲಿ "ಮಾನವನು ಸ್ವತಂತ್ರನಾಗಿ ಒಲವಿದ್ದ ಕಡೆ ಬಾಗಿ ಹೊಂದಲು ಅಡ್ಡಿ ಮಾಡಿ "ಯೋಗ್ಯತಾನುಸಾರ ವಿಕಾಸ"ವಾದದ ಬುಡಕ್ಕೆ ಕೊಡಲಿ ಹಾಕಿದಂತೆ ಕಂಡು ಬರುತ್ತದೆಯೋ ಅಥವಾ ಯಾರು ಯಾವ ಜಾತಿ ಬೇಕಾದರೂ ಆಗಬಹುದೆಂಬ ಉಚ್ಛೃಂಖಲತೆಯಿಂದ ಸಮಾಜದಲ್ಲಿ ಅನಿರ್ದಿಷ್ಟ ಗೊಂದಲವೆದ್ದು ಅತ್ಯಾಚಾರ, ದುರಾಕ್ರಮಣಗಳಿಗೆಡೆಗೊಡಬಾರದೆಂಬ ಅಭಿಪ್ರಾಯ ಕಂಡುಬರುತ್ತದೆಯೊ? "ಶೂದ್ರೋ ಬ್ರಾಹ್ಮಣತಾಮೇತಿ ಬ್ರಾಹ್ಮಣಶ್ಚೈತಿ ಶೂದ್ರತಾಂ।...." ಈ ಶ್ಲೋಕದ ಅಭಿಪ್ರಾಯವಾದರೂ "ಶೂದ್ರನು ಬ್ರಾಹ್ಮಣನಾಗುತ್ತಾನೆ ಬ್ರಾಹ್ಮಣನು ಶೂದ್ರನಾಗುತ್ತಾನೆ" ಅಂದರೆ ಒಬ್ಬರ ಸ್ಥಾನವನ್ನು ಒಬ್ಬರು ಅತ್ರಮಿಸಿ ವರ್ಣಸಾಂಕರ್ಯಕ್ಕಾಸ್ಪದ ಉಂಟೆಂಬ ಸಂಭವ ವಾಕ್ಯವೇ ಹೊರತು ವಿಧಿವಾಕ್ಯವಲ್ಲ. ವೇದದಲ್ಲಿಯೂ ಮನುಸ್ಮೃತಿಯಲ್ಲೂ ೩೦ ಸಂಕರ ಜಾತಿಗಳನ್ನು ವಿವರಿಸಿದ್ದು ನೋಡಿದರೆ ಜನ್ಮದಿಂದಲೇ ಜಾತಿ ನಿರ್ಣಯವನ್ನೂ ಜನ್ಮವು ತಿಳಿಯದಾಗ ಕರ್ಮದಿಂದ ಜಾತಿ ನಿರ್ಣಯವನ್ನೂ ಮಾಡುವ ಪದ್ಧತಿಯು ಅನಾದಿಸಿದ್ಧವಾಗಿ ಕಂಡುಬರುತ್ತದೆ.

"ಯ ಇಹ ರಮಣೀಯ ಚರಣಾ ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮಾಪದ್ಯೇರನ್ ಬ್ರಾಹ್ಮಣಯೋನಿಂ ವಾ ಕ್ಷತ್ರಿಯಯೋನಿಂ ವಾ ವೈಶ್ಯಯೋನಿಂ ವಾಽಥ ಯ ಇಹ ಕಪೂಯಚರಣಾ ಅಭ್ಯಾಶೋ ಹ ಯತ್ತೇ ಕಪೂಯಾಂ ಯೋನಿಮಾಪದ್ಯೇರನ್ ಶ್ವಯೋನಿಂ ವಾ ಸೂಕರಯೋನಿಂ ವಾ ಚಾಂಡಾಲಯೋನಿಂ ವಾ (ಛಾಂದೋಗ್ಯ ಶ್ರುತಿ ೫ ೧೦-೭)

ಈ ಶ್ರುತಿಯಲ್ಲಿ ಯೋಗ್ಯಾಚರಣೆಯುಳ್ಳವರು ಮರಣಾನಂತರ ಉತ್ತಮ ಯೋನಿ (ಜನ್ಮ)ಯನ್ನೂ ಹೇಯಾಚರಣೆಯುಳ್ಳವನು ಕೀಳು ಜನ್ಮವನ್ನೂ ಹೊಂದುವರೆಂಬ ಮಾತು ಸ್ಪಷ್ಟವಾಗಿ ಜನ್ಮವನ್ನೇ ಜಾತಿಗೆ ಪ್ರಧಾನವೆಂದೆನ್ನುವುದು ಕಂಡುಬರುತ್ತದೆ.

ಮಹಾಭಾಷ್ಯಕಾರ ಪತಂಜಲಿಯು (ನಪಾ. ೨।೨।೬) ಈ ಸೂತ್ರದ ಭಾಷ್ಯದಲ್ಲಿ "ತಪಃ ಶ್ರುತಂ ಚ ಯೋನಿಶ್ಚ ಇತ್ಯೇತದ್ಬ್ರಾಹ್ಮಣ ಕಾರಣಂ। ತಪಃಶ್ರುತಾಭ್ಯಾಂ ಯೋ ಹೀನೋ ಜಾತಿಬ್ರಾಹ್ಮಣ ಏವ ಸಃ। ಎಂದು" ಸ್ಪಷ್ಟವಾಗಿ ಜನ್ಮವೂ ವರ್ಣಕ್ಕೆ ಕಾರಣವೆಂದು ಹೇಳಿದ್ದಾನೆ.

ಜನ್ಮನಾ ಬ್ರಾಹ್ಮಣೋ ಜ್ಞೇಯಃ  
ಸಂಸ್ಕಾರೈರ್ದ್ವಿಜ ಉಚ್ಯತೇ।  
ವಿದ್ಯಯಾ ಯಾತಿ ವಿಪ್ರತ್ವಂ ಶ್ರೋತ್ರಿಯ  
ಸ್ತ್ರಿಭಿ ರೇವ ಚ (ಅತ್ರಿಸಂಹಿತಾ ೧೪೧-೧೪೨)

"ಚತ್ವಾರೋವರ್ಣಾ ಬ್ರಾಹ್ಮಣ ಕ್ಷತ್ರಿಯವೈಶ್ಯಶೂದ್ರಾಃ ।೪।" "ತೇಷಾಂ ಪೂರ್ವಃ ಪೂರ್ವೋ ಜನ್ಮತಃ ಶ್ರೇಯಾನ್ ।೫।" (ಅಪಸ್ತಂಬಧರ್ಮ ಸೂತ್ರ)

## ನಿರ್ಣಯ ಹೇಗೆ? ಯಾರಿಂದ?

ಯೋಗ್ಯತಾನುಸಾರ ವರ್ಣನಿರ್ಣಯ ಮಾಡುವ ಬಗೆ ಹೇಗೆಂಬುದನ್ನೇ ಶ್ರೀಯುತರು ವರ್ಣಿಸಿಲ್ಲ "ಯಾರು ಬೇಕಾದರೂ ಸೇವೆ ಮಾಡಬಹುದು ಯಾರು ಬೇಕಾದರೂ ಸೇವೆ ಮಾಡಿಸಿಕೊಳ್ಳಬಹುದು" ಎಂದರೆ ಎಲ್ಲರೂ ಸೇವೆ ಮಾಡಿಸಿಕೊಳ್ಳಲು ಸಿದ್ಧರಾದಾರೇ ಹೊರತು ಸೇವೆ ಮಾಡಲು ಬಹಳ ಕಡಿಮೆ ಜನ ಸಿದ್ಧರಾದಾರು. "ಇಂಥವನು ಸೇವೆ ಮಾಡಲಿ; ಇಂಥವನು ಅಧ್ಯಾಪನ ಮಾಡಲಿ; ಇಂಥವನು ಸೇವೆ ಮಾಡಿಸಿಕೊಳ್ಳಲಿ" ಎಂದರೆ ಆಗಲೂ ಉಚ್ಚನೀಚ ಭಾವನೆಗವಕಾಶವಿದ್ದೇ ಇದೆ. ಮತ್ತು ಈ ಯೋಗ್ಯತೆಯನ್ನು ನಿರ್ಣಯಿಸುವವನಾರು? ಯೋಗ್ಯತೆಯನ್ನು ನಿರ್ಣಯಿಸುವವನ "ಸ್ವಾರ್ಥ ಮತ್ತು ಅಂಧಕಾರಮಯವಾದ ಅಜ್ಞಾನ"ದಿಂದ ಯೋಗ್ಯತಾನುಸಾರ ವರ್ಣವ್ಯವಸ್ಥೆ ಮಾಡುವ ಪದ್ಧತಿಯೂ ದುಷ್ಟವಾಗಲಾರದೆ? ಸ್ವಾರ್ಥ ಮತ್ತು ಅಜ್ಞಾನದ ಯುಗ ಕಳೆದು ಈಗ ಕೇವಲ ನಿಸ್ವಾರ್ಥ ಮತ್ತು ಜ್ಞಾನಯುಗವೇ ಬಂದಿರುವುದೇನು? ಅವರವರೇ ತಮ್ಮ ತಮ್ಮ ಯೋಗ್ಯತೆಯರಿತು ಉದಾರತೆಯಿಂದ ಸಮಾಜಕ್ಕೆ ಸೇವೆ ಸಲ್ಲಿಸಬೇಕೆಂದರೆ ಆ ಉದಾರತೆ ಸರ್ವ ಸುಲಭವಲ್ಲ. ಅಥವಾ ತಾನು ಉನ್ನತ ಮಟ್ಟದವನಂತೆ ತಿಳಿದಾತ ತನಗಿಂತ ಕೆಳ ಮಟ್ಟದವನನ್ನು ತಿರಸ್ಕಾರದಿಂದ ಕಾಣಲು ಆಗಲೂ ಅವಕಾಶವಿದೆ. ತಾನು ಕಡಿಮೆ ಯೋಗ್ಯತೆಯವನೆಂತ ಉದಾರತೆಯಿಂದಲೇ ಸಮಾಜಕ್ಕೆ ತನ್ನ ಪಾಲಿನ ಸೇವೆ ಸಲ್ಲಿಸುತಿದ್ದರೆ ಅದು "ಅವನ ಅಜ್ಞಾನ, ಮಬ್ಬು ಮತ್ತು ಅಂಧ ಶ್ರದ್ಧೆಯ ದ್ಯೋತಕ"ವೆನ್ನುವವರು ಆಗಲೂ ಇರುತ್ತಾರೆ. ಹಾಗಾದರೆ "ಎಂ. ಎ; ಬಿ. ಎ. ಮುಂತಾದ ಡಿಗ್ರಿಗಳಂತೆ ಬ್ರಾಹ್ಮಣ, ಕ್ಷತ್ರಿಯ ಮುಂತಾದ ಡಿಗ್ರಿಗಳನ್ನು ನಿರ್ಮಿಸಿ ಇದಕ್ಕೊಂದು ಯೂನಿವರ್ಸಿಟಿ ತೆರೆಯಬೇಕೆಂ"ಬುದೇ ಶ್ರೀಯುತರ ಅಭಿಪ್ರಾಯವಿರಬಹುದೆ? ಅಥವಾ ನಾಲ್ಕೂ ವರ್ಣಗಳನ್ನೂ ಅಳಿಸಿ ಕೇವಲ ಒಂದೇ ಮತವೆಂತ ಸಾರಿದರೂ ಹೃದಯ ಒಂದಾಗದಿರುವುದಕ್ಕೆ ಬೇಕಾದಷ್ಟು ಕಾರಣಗಳಿವೆ. ಹಿಂದೂ-ಮುಸ್ಲಿಂ-ಕ್ರೈಸ್ತ, ಕಮ್ಯುನಿಸ್ಟ-ಸೋಶಿಯಾಲಿಸ್ಟ-ಫ್ಯಾಸಿಸ್ಟ, ಸಸ್ಯಾಹಾರಿ-ಮಾಂಸಹಾರಿ, ಶ್ರೀಮಂತ-ಬಡವ, ವಿದ್ಯಾವಂತ-ದಡ್ಡ, ಕನ್ನಡಿಗ-ಬಂಗಾಲಿ-ಮಲಯಾಳಿ ಈ ಮುಂತಾದ ಲೆಕ್ಕವಿಲ್ಲದಷ್ಟು ಗುದ್ದದಂತಹ ವೈಷಮ್ಯಭಾವಗಳು ಇಂದು ತಾಂಡವವಾಡುತ್ತಿದ್ದರೂ ಜನ್ಮದಿಂದ ವರ್ಣ ವ್ಯವಸ್ಥೆಯೇ ದೊಡ್ಡ ಭೂತವಾಗಿ ಕಾಣುತ್ತಿರುವುದರ ರಹಸ್ಯವೇ ನಮಗೆ ಹೊಳೆಯದಾಗಿದೆ. ಈ ವಿಶ್ವ ವ್ಯಾಪೀ ಸಹಜ ಭೇದಗಳೆಲ್ಲ ನಿರ್ಮೂಲವಾಗಿ, ಕಾಮಕ್ರೋಧ-ಲೋಭ ಮತ್ಸರಾದಿ ದುರ್ಗುಣಗಳೊಂದೂ ಇಲ್ಲದಂತೆ ಜಗತ್ತಿನ ಪ್ರಾಣಿಗಳೆಲ್ಲವೂ ಸಮಾನ ಸುಖವನ್ನು ಅನುಭವಿಸುವ ಭವ್ಯ ಕಲ್ಪನೆ ಕಲ್ಪನೆಯಲ್ಲೇ ಲಯ ಹೊಂದೀತೇ ಹೊರತು ಪ್ರತ್ಯಕ್ಷ ಸಿದ್ಧವಾಗಲಾರದು.

## ಅಸಂತುಷ್ಟಿಗೆ ಮದ್ದಿಲ್ಲ

ಎಲ್ಲಿಯವರೆಗೆ ಸ್ವಾರ್ಥ—ಕಾಮ-ಕ್ರೋಧ-ಲೋಭಗಳಿವೆಯೋ ಅಲ್ಲಿಯವರೆಗೆ ಜಾತಿ ಜನ್ಮದಿಂದಿರಲಿ-ಯೋಗ್ಯತಾನುಸಾರ ಇರಲಿ, ಜಾತಿಗಳ ಹೆಸರನ್ನೆಲ್ಲಾ ಅಳಿಸಿಬಿಡಲಿ ಖಂಡಿತವಾಗಿಯೂ ಶಾಂತಿಯು ದೊರಕಲಾರದು. ಒಬ್ಬ ಸ್ವಯಂಪ್ರೇರಣೆಯಿಂದ ಶೂದ್ರಯೋಗ್ಯತೆಯುಳ್ಳವನು ತನ್ನ ಸೇವೆಯನ್ನು ಸಲ್ಲಿಸಹೊರಟರೆ "ಇವನೊಬ್ಬ ದಡ್ಡ ಅಜ್ಞಾನಿ!" ಎನ್ನುವವರೂ ಇನ್ನೊಬ್ಬ ಬ್ರಾಹ್ಮಣ ಯೋಗ್ಯತೆಯುಳ್ಳವನು ಸಮಾಜ ಸೇವೆಗೆ ಹೊರಟರೆ "ಓಹೊ! ಇವನೇನು ಮಹಾ!" ಎನ್ನುವವರೂ ಇದ್ದೇ ಇರುತ್ತಾರೆ.

"ಒಲವಿದ್ದ ವೃತ್ತಿಯ ಕಡೆಗೆ ಬಾಗುವ ಸ್ವಾತಂತ್ರ್ಯ ಮಾನವನಿಗೆ ನಿಸರ್ಗಸಿದ್ಧವಾದುದು." ಅಲ್ಲವೆಂದು ಯಾರೆಂದರು? ಆದರೆ ವೃತ್ತಿಯೇ ಬೇರೆ, ವರ್ಣವೇ ಬೇರೆ. ವೃತ್ತಿಯೆ ಜಾತಿಯೆಂತಾದರೆ ಒಬ್ಬ ಹರಿಜನನು ಮುನಸಲ್ಯಾನನಾಗುವ ಒಲವಿನಿಂದ ಅವನು ಸ್ವತಂತ್ರನೇ ಆದಾನು. ಈ ಸ್ವತಂತ್ರ ಪ್ರವೃತ್ತಿಯನ್ನು ಯೋಗ್ಯತಾನುಸಾರ ವರ್ಣ ವ್ಯವಸ್ಥೆಯಿಂದಲೂ ತಡೆಗಟ್ಟಲು ಸಾಧ್ಯವಿಲ್ಲ.

"ಜನ್ಮಗತವಾದ ವರ್ಣವ್ಯವಸ್ಥೆ ರೂಢವಾಗದಿದ್ದಲ್ಲಿ ನಾವಿಂದು ಚೂರು ಚೂರಾಗಿ ಒಡೆದಿರುತ್ತಿರಲಿಲ್ಲ. ನಮ್ಮ ನಮ್ಮಲ್ಲಿ ಪರಸ್ಪರ ವೈಷಮ್ಯ ಹುಟ್ಟುತ್ತಿರಲಿಲ್ಲ"ವೆಂದು ಪಂಡಿತರು ಉದ್ಗರಿಸುತ್ತಾ ಒಂದೆಡೆಗೆ "ಹುಟ್ಟನಿಂದಲೇ ಬೇರೆ ಬೇರೆ ಜಾತಿ" ಎಂಬ ರಾಕ್ಷಸೀ ಭಾವನೆ, ಜೊತೆಯಲ್ಲಿ ಕುಳಿತುಣ್ಣಲು, ಪರಸ್ಪರ ರಕ್ತ ಸಂಬಂಧ ಬೆಳೆಸಲು, ಪ್ರೇಮದಿಂದ ಮಾನವತ್ವವನ್ನೆತ್ತಿಹಿಡಿಯಲು ಅವಕಾಶಕೊಡುವಂತಿಲ್ಲ" ಎಂತ ಪ್ರಸ್ತುತ ಹಿಂದೂ ಸಮಾಜದ ಮೇಲೆ ಶ್ರೀಮಾನ್ "ಸುಧಾ"ಕರರು "ವಿಷ" ಕಾರಿದ್ದಾರೆ. ಆದರೆ ಯಾವ ವಿಧವಾದ ವರ್ಣವ್ಯವಸ್ಥೆಯೂ ಜನ್ಮಗತವಾಗಿಲ್ಲದ ಪಾಶ್ಚಾತ್ಯರಲ್ಲೇಕೆ ಇಂದು ಒಡಕು ವೈಷಮ್ಯಗಳು? ಒಂದೇ ಇಸ್ಲಾಂ ಧರ್ಮದವರಾದ ಪಾಕಿಸ್ತಾನ ಅಫಗಾಣಿಸ್ತಾನಗಳ ಮಸೆದಾಟವೇಕೆ? ಒಂದೇ ರಕ್ತದ ಕೌರವ ಪಾಂಡವರು ಒಟ್ಟಿಗೆ ಉಂಡುಟ್ಟು, ಆಡಿ, ಮಲಗಿ, ಬೆಳೆದರೂ ಪ್ರೇಮವಂಕುರಿಸಲಿಲ್ಲೇಕೆ? ನಾಗರಿಕ ರಾಮನಿಗೂ, ಕಾಡು ಜನ ವಾನರರಿಗೂ ಸ್ನೇಹ ಬಿದ್ದಿದ್ದು ಒಟ್ಟಿಗೆ ಕುಳಿತುಂಡದ್ದರಿಂದಲೊ? ಒಬ್ಬರಿಗೊಬ್ಬರು ಮುಟ್ಟಿಕೊಂಡು ಅಸ್ಪೃಶ್ಯತಾ ನಿವಾರಣೆ ಮಾಡಿದ್ದರಿಂದಲೊ? ರಕ್ತಸಂಬಂಧ ಬೆಳೆಸಿದ್ದರಿಂದಲೋ? ದಿವಂಗತ ಪೂಜ್ಯ ಬಾಪೂಜಿಯವರು, ಸ್ವಾಮಿ ವಿವೇಕಾನಂದರು, ಸ್ವಾಮೀ ರಮಾನಂದತೀರ್ಥರು, ರಾಮಕೃಷ್ಣ ಪರಮಹಂಸರು, ವರ್ತಮಾನಕಾಲದಲ್ಲಿ ಶ್ರೀರಮಣ ಮಹರ್ಷಿ, ಅರವಿಂದಘೋಷ ಮುಂತಾದ ಮಹನೀಯರೆಲ್ಲರೂ ವಿಶ್ವಪ್ರೇಮಗಳಿಸಿ ಮಾನವತ್ವದಿಂದ ದೇವತ್ವಕ್ಕೇರಿದ್ದು ಎಲ್ಲರ ಜೊತೆಯಲ್ಲಿ ಕುಳಿತುಂಡದ್ದರಿಂದಲೊ? ರಕ್ತಸಂಬಂಧ ಬೆಳೆಸಿದ್ದರಿಂದಲೊ? ಶ್ರೀಯುತರು ಪರಸ್ಪರ ಪ್ರೇಮ ಬೆಳೆಸಲು ರಕ್ತಸಂಬಂಧ ಬೆಳೆಸಿ, ಜೊತೆಯಲ್ಲಿ ಕುಳಿತುಣ್ಣುವುದೇ ಯೋಗ್ಯ ಮಾರ್ಗವೆಂತ ಕಂಡು ಹಿಡಿದಿದ್ದಾರೆ. ಹೃದಯ ಸೇರದೆ ಒಟ್ಟಿಗೆ ಕುಳಿತುಣ್ಣುವುದೂ ರಕ್ತಸಂಬಂಧ ಬೆಳೆಸುವುದೂ ಹೇಗೆಂದೂ ನನಗೆ ಅರ್ಥವಾಗಲಿಲ್ಲ. ಬೇರೆ ಜಾತಿಯಲ್ಲಿ ಹುಟ್ಟಿ ಒಬ್ಬರನ್ನೊಬ್ಬರು ಮುಟ್ಟದಿದ್ದವರೂ ಪರಸ್ಪರ ಉಪಕಾರ ಸಹಾನುಭೂತಿಗಳಿಂದ ಹೃದಯೈಕ್ಯವನ್ನು ಪಡೆದ ದೃಷ್ಟಾಂತಗಳೂ ಇವೆ; ಒಂದೇ ವಂಶದ ಯಾದವರೆಲ್ಲರೂ ಒಟ್ಟಿಗೆ ಸುರಾಪಾನಮಾಡಿ ಬಡಿದಾಡಿ ಸತ್ತ ಕತೆಯೂ ಲೋಕಪ್ರಸಿದ್ಧವಿದೆ.

ತಮ್ಮ ಅನುವಂಶಿಕ ವೃತ್ತಿಗಳಲ್ಲಿ ಪ್ರವೃತ್ತಿಯುಳ್ಳವರೇ ಇಂದು ಅಪವಾದರೂಪವಾಗಿದ್ದಾರೆಂಬುದು ಕೇವಲ ಉದ್ಗಾರವೇ ಹೊರತು ತರ್ಕಸಮ್ಮತವಲ್ಲ. ಅನುವಂಶಿಕ ಸಂಸ್ಕಾರಗಳು ಕೆಲವೊಂದು ವ್ಯಕ್ತಿಗಳಲ್ಲಿ ಸಂಗಸಂಸ್ಕಾರದ ಪ್ರಾಬಲ್ಯದಿಂದ ಸುಪ್ತವಾಗಿದ್ದರೂ ಹಲವು ವ್ಯಕ್ತಿಗಳಲ್ಲಿ ಅನುವಂಶಿಕ ವೃತ್ತಿಯೇ ಹೆಚ್ಚು ಹಿತಕರವೂ ಸಹಜಸಿದ್ಧವೂ ಲಾಭಕಾರಿಯೂ ಆಗಿದ್ದುದು ಕಂಡುಬರುತ್ತದೆ. ಅದ್ದರಿಂದಲೇ ಚಮ್ಮಾರನ ಮಗನಿಗೆ ಚಪ್ಪಲಿ ಹೊಲಿಯುವುದರಲ್ಲಿರವಷ್ಟು ಸೌಲಭ್ಯ ನಿರುಪದ್ರವ ಅನ್ಯವೃತ್ತಿಯಲ್ಲಿರಲಾರದು. ವಕೀಲನ ಮಗ ವಕೀಲನಾಗುವುದೂ ಡಾಕ್ಟರನ ಮಗ ಡಾಕ್ಟರನಾಗುವುದೂ ದೇಶದ ತುಂಬ ಅನುವಂಶೀಕವಾಗಿಯೇ ರೂಢವಾದಾಗ ಈ ವೃತ್ತಿಗಳೂ ಈಗಿರುವುದಕ್ಕಿಂತ ಎಷ್ಟೋ ಸುಲಭವಾದಾವೆಂತಲೇ ನಮ್ಮ ಸಿದ್ಧಾಂತ.

ಕಾಲಿನ ಕೆಲಸವನ್ನು ಕೈಯಿಂದಲೇ ಮಾಡುವ ಅಭ್ಯಾಸವನ್ನು ದೇಶಕ್ಕೆ ದೇಶವೇ ಮಾಡಿಕೊಂಡಾಗ ಕೈಗೇ ಕಾಲಿನ ಅರ್ಥ ಉಪಯೋಗಿಸಬಹುದು. ಆದರೆ ದೇಶಕ್ಕೆ ದೇಶವೇ ಹೀಗೆ ಅಭ್ಯಾಸಮಾಡಲು ಅತಿಪ್ರಬಲವಾದ ಕಾರಣಬೇಕು. ಸಾಮಾನ್ಯವಾಗಿ ಇದು ಅಸಂಭವ. ಕೆಲವರು ಅಭ್ಯಾಸಿಸುವುದು ಸಂಭವ. ಆದಾಗ್ಯೂ ಕಾಲೆನ್ನುವುದಕ್ಕೆ ಇರುವ ಅರ್ಥವನ್ನು ಆಗ ಕೈಗೇ ಉಪಯೋಗಿಸಿಕೊಂಡಾಗ ಆಗಲೂ ಅದಕ್ಕೆ ಗುಣಕರ್ಮದ ಯೋಗ್ಯತೆ ಜನ್ಮದಿಂದಲೇ ಸಿದ್ಧವಾಗಿರುವುದಿಲ್ಲವೆ? ದೇಶಕ್ಕೆ ದೇಶವೇ ಕೈಯಿಂದ ನಡೆದಾಡುವುದು ರೂಢವಾಗಿದ್ದಾಗ ಮಗು ಹುಟ್ಟಿದೊಡನೆಯೇ ನಡೆದಾಡುವುದೇ ಈ ಕೈಯ ಕೆಲಸವೆಂದು ನಿರ್ಣಯವಾಗುವುದಿಲ್ಲವೆ? ಮುಖವು ಮಾತಾಡುತ್ತದೆಯೊ ಇಲ್ಲವೊ ಎಂದು ನೋಡಿಕೊಂಡು ಆ ಮೇಲೆ ಅದಕ್ಕೆ ಮುಖವೆಂತ ಹೆಸರಿಡುತ್ತದಿಲ್ಲ. ಹೀಗೇ ಕಾಲಿಗೂ.

ಇನ್ನು ಗೀತೆಯಲ್ಲಿ ವ್ಯಾಘಾತ ದೋಷವು ಕಂಡುಬರುವದು ಕೇವಲ ದೃಷ್ಟಿ ದೋಷದಿಂದಲೇ ಹೊರತು ವಸ್ತುಸ್ಥಿತಿಯಲ್ಲಲ್ಲ. ಬ್ರಾಹ್ಮಣ, ಹಸು, ಆನೆ, ನಾಯಿ, ನಾಯಿ ಮಾಂಸ ತಿನ್ನುವಾತ ಇವರೆಲ್ಲರ ಜೊತೆ ಕುಳಿತು ಉಣ್ಣುವುದೇ ಅಥವಾ ರಕ್ತಸಂಬಂಧ ಬೆಳೆಸುವುದೇ ಸಮತ್ವವೆಂದಾಗಲಿ, ಹಸುವಿಗೂ ಆನೆಗೂ, ನಾಯಿಗೂ, ಬ್ರಾಹ್ಮಣನಿಗೂ, ಚಾಂಡಾಲನಿಗೂ ಎಲ್ಲರಿಗೂ ಒಂದೊಂದು ಮುಷ್ಟಿ ಹುಲ್ಲುಹಾಕಿ ಅಥವಾ ಒಂದಿಷ್ಟು ಮಾಂಸ ಎಲ್ಲರಿಗೂ ತಿನ್ನಿಸಿಬಿಡುವುದೇ ಸಮತ್ವವೆಂದಾಗಲಿ ಅಲ್ಲ. ನಾಯಿಯನ್ನು ನಾಯಿಯೆಂತಲೂ ಆನೆಯನ್ನು ಆನೆಯೆಂತಲೂ ತಿಳಿದು ಅವುಗಳ ಅಂತಃಕರಣದಲ್ಲಿ ಸುಖ-ದುಃಖದ ಅನುಭವ ಸಮಾನವಾಗಿರುವುದಲ್ಲದೆ ಪರಮಾತ್ಮನೂ ಅಂತರ್ಯಾಮಿಯಾಗಿರುವನೆಂಬಂಶವನ್ನು ತಿಳಿಯುವುದೇ ಸಮದರ್ಶನ. ಪಾಪಯೋನಿಗಳಿಗೂ, ದುರಾಚಾರಿಗಳಿಗೂ, ಸ್ತ್ರೀವೈಶ್ಯ ಶೂದ್ರಾದಿಗಳಿಗೂ ಪರಮಾತ್ಮನನ್ನು ಹೊಂದುವುದು ಸಾಧ್ಯವೆಂಬ ಮಾತಿನಲ್ಲೂ ಅದೇ ಸಮತ್ವನೇ ಎದ್ದು ಕಾಣುವುದಿಲ್ಲವೆ?

ಬರಿಗೆ — ವೈದ್ಯ ಗ. ಸು. ಪಾಟೀಲ

---

# ಮೈಸೂರು ಮಂತ್ರಿಮಂಡಲದ ಮೇಲಿನ ಆರೋಪಗಳು

ಮೈಸೂರಿನ ಮಂತ್ರಿಮಂಡಳದ ಮೇಲೆ ಇತ್ತೀಚೆಗೆ ಬಹಳ ಆರೋಪಗಳು ಕೇಳಿ ಬರುತ್ತಿವೆ. ಮದ್ರಾಸ್ ಮಂತ್ರಿಮಂಡಳದಂತೆ ವಿಚಾರಣೆಗೆ ಗುರಿಪಡಿಸದಿದ್ದರೂ ಇಂದು ಮುಂದಿನ ಒಳಾಡಳಿತೆಯನ್ನು ಹೊರಗೆಡಹಿ ಸತ್ಯಾಂಶವನ್ನು ಹೊರಹಾಕುವ ಜವಾಬ್ದಾರಿಯು ಮೈಸೂರಿನ ಕಾಂಗ್ರೆಸ ಅಧ್ಯಕ್ಷರ ಮೇಲೂ ಬಿದ್ದಿದೆ. ಇದಕ್ಕೆ ಅವರೇ ಉತ್ತರ ಹೇಳಬೇಕು. ತಪ್ಪಿತಸ್ಥರಾದ ಮಂತ್ರಿಗಳನ್ನು ತಕ್ಕ ಶಿಕ್ಷೆಗೆ ಗುರಿಪಡಿಸಲೇಬೇಕು. ಆದರೆ ಈ ಆರೋಪದಲ್ಲಿ ಹಣಕಾಸಿನ ಮಂತ್ರಿಗಳಾದ ಎಚ್. ಸಿ. ದಾಸಪ್ಪನವರೂ ಸಿಕ್ಕಿರುವುದನ್ನು ನೋಡಿದರೆ ಮೈಸೂರಿನ ಜನತೆಗಳೆಲ್ಲರೂ ಬಹಳ ಆಶ್ಚರ್ಯಪಡಬೇಕಾಗಿದೆ. ಪೂಜ್ಯ ಮಹಾತ್ಮಾಜಿಯವರ ಸೇವೆಗೈದು ಅವರ ಸನ್ನಿಧಿಯಲ್ಲಿ ನಾಲ್ಕಾರು ವರ್ಷ ಒಡನಾಡಿ ಶಿಷ್ಯರಾಗಿ ಅದರೆ ಅವರ ತತ್ವವನ್ನು ನಿರಾಕರಿಸಿ ಒಂದು ರಾಷ್ಟ್ರಕ್ಕೆ ವಂಚನೆಯನ್ನು ಮಾಡಲಾರರು. ಈಗಿನ ದಿವಾನರಾದ ಅರ್ಕಾಟ ರಾಮಸ್ವಾಮಿಯವರು ಮುಂದಿನ ತಿಂಗಳು ನಿವೃತ್ತರಾಗುವರು. ಇದರಿಂದ ಇನ್ನು ಮುಂದೆ ಬಹಳ ಅನರ್ಥವಾಗಬಹುದು. ಅದ್ದರಿಂದ ಅವರಿಗೆ ಮುಖ್ಯ ಹುದ್ದೆಯದನ್ನು ದಯಪಾಲಿಸಿ ಅವರ ಸಲಹೆಯನ್ನು ಅನುಸರಿಸಿದರೆ ಮೈಸೂರಿನ ಏಳಿಗೆಯು ಖಂಡಿತ ಕುಗ್ಗಲಾರದು.

-ಟಿ. ಮಹಾಬಲೇಶ್ವರ ಭಟ್ಟ  
ಸಾಗರ



# ತಿರುವು — ಮುರುವು

## ಭಾರತದ ಮಂತ್ರಿಮಂಡಳ ಇಲ್ಲದೆ ರಾಜಕೀಯ ಭವಿಷ್ಯ

ಮಂತ್ರಿಮಂಡಳಕ್ಕೂ ರಾಜಕೀಯಕ್ಕೂ ಸಂಬಂಧ, ಅದರಂತೆ ವಾರ (೭ ದಿನ) ಕ್ಕೂ ಭವಿಷ್ಯಕ್ಕೂ ಸಂಬಂಧ ಎಂದು ಅನೇಕರು ತಿಳಿದಿರಬಹುದು. ಆದರೆ ಇಂದು ಕ್ರಾಂತಿಯ ಕಾಲ, ಕ್ರಾಂತಿ ಎಂದರೆ ಕನ್ನಡದಲ್ಲಿ "ತಿರುವು ಮುರುವು" ಎಂದರ್ಥ. ಆದ್ದರಿಂದ ಜನ ತಿಳಿದುಕೊಂಡ ಸಂಬಂಧದಲ್ಲಿ ಈಗ ಮೇಲೆ ಕಾಣಿಸಿದಂತೆ ಕ್ರಾಂತಿ-ಅರ್ಥಾತ್-ತಿರುವು ಮುರುವು ಆಗಿದೆ. ಕ್ರಾಂತಿಯನ್ನು ಮಾಡುವ ಅಧಿಕಾರ ಮಾತ್ರ ಕ್ರಾಂತಿಕಾರಕ ಪಕ್ಷದ ಹೊರತು ಬೇರೆ ಯಾರಿಗೂ ಇಲ್ಲ. ಅದಕ್ಕೆಂದೇ ಶ್ರೀ ಶರಚ್ಚಂದ್ರ ಬೋಸರ ಕ್ರಾಂತಿಕಾರಕ ಪಕ್ಷವು ಈ ತಿರುವು-ಮುರುವನ್ನು ಘೋಷಿಸಿದೆ. ರಾಜಕೀಯದ ಭವಿಷ್ಯವೆಂದರೆ "ಒಂದು ವರ್ಷದಲ್ಲಿ ಕಾಂಗ್ರೆಸ ರಾಜ್ಯವು ಉರುಳುವುದೆಂ"ದು. ಈ ಭವಿಷ್ಯ ಸುಳ್ಳಾಗುವುದು ಶಕ್ಯವಿಲ್ಲ. ಯಾಕೆಂದರೆ ೨ ತಿಂಗಳು ಪರದೇಶಗಳ ರಾಜಕಾರಣವನ್ನೇ ಕಣ್ಣಾರೆ ಅನುಭವಿಸಿ ಮರಳುವಾಗ ಅಂದವಾಕ್ಕೆಯೂ ಶ್ರೀ ಬೋಸರು ಭಾರತದ ಬಗ್ಗೆ ಭವಿಷ್ಯವನ್ನು ನುಡಿದಿದ್ದಾರೆ. ವಾದ ಕೇಳಿದರೆ ಶ್ರೀ ಶರಚ್ಚಂದ್ರರು ಲಂಡನದಿಂದ ಭಾರತವನ್ನು ಮುಟ್ಟುವಷ್ಟರಲ್ಲಿಯೆ ಕಾಂಗ್ರೆಸ ರಾಜ್ಯ ಉರುಳಬೇಕಾಗಿತ್ತು. ಯಾಕೆ ಉಳಿಯಿತೊ? ಅಂತೂ ಒಂದು ವಾರದ ಅವಧಿಯನ್ನು ಬೋಸರು ದಯಪಾಲಿಸಿದ್ದಾರೆ. ಹಹ! ಕಾಂಗ್ರೆಸರಾಜ್ಯ ಉರುಳುತ್ತಿದೆ, ಅಗೊ! ಉರುಳಿಯೆ-! ಬಿಟ್ಟಿತು!!-ಮುಂದೆ ? ಭಾರತೀಯ ಕೋಟಿಗಳೆ, ಬೆದರಬೇಡಿರಿ! ಒಂದೇ ವಾರದಲ್ಲಿ ಬೋಸರು ಸಮಾಜವಾದೀ ಮಂತ್ರಿಮಂಡಳವನ್ನೆ ರಚಿಸುವರು, ತಿಳಿಯಿತೆ? ತ್ವರೆ ಮಾಡಿರಿ. ಯಾರಾರಿಗೆ ಬೋಸರ ಪಕ್ಷವನ್ನು ಕೂಡುವುದಿದೆಯೊ ಅಂತಹರಿಗೆ ಅವಧಿ ಬಹಳೇ ಸ್ವಲ್ಪವಿದೆ. ಮಂತ್ರಿಯಾಗಲು ಇನ್ನು ಸ್ವಾರ್ಥತ್ಯಾಗದ ಅಗತ್ಯವಿಲ್ಲ, ಸ್ವಪಕ್ಷತ್ಯಾಗವಾದರೆ ಸಾಕು. ಒಂದೇವಾರ! ಎರಡನೆಯ ಸವಾಲು— ಒಂದೇವಾರ, ಬೋಸರ ಮಾಲು-ಎರಡ್.-ಅಲ್ಲ...ಮೂರ್.. ಅಲ್ಲಲ್ಲ...ಮೊದಲಿನಿಂದ ಸವಾಲು..

× × ×

## ತಿರುಕಪ್ಪನ ಸ್ವಾತಂತ್ರ್ಯ—ತಂತ್ರ

ಯಾರ್ರೀ ಅವರು ಪಾಟೀಲ ಅಂದ್ರ? ಅದೇ..ನಾಗಪುರದ ಗೌಡರೇನು? ಅಲ್ಲ— ಹೊಟ್ಟೆಯ ಮ್ಯಾಲೆ ಕಾಲ ಕೊಡೋದು ಅಂದ್ರ ಎಲ್ಲಿ ತನಕ? ಬೆನ್ನ ಮ್ಯಾಲೆ ಅಂಗಾಲ ಕಾಣೋ ತನಕಾನ? ಸುಸೂತ್ರ ಮಂತ್ರಿ ಅದವನ್ನ ಬಿಡಿಸಿ, ಅಲ್ಲಿ ಮಂತ್ರಿ ಯಾರು ಅಂತ ಜಗಳ ಹಚ್ಚಿ, ಇಲ್ಲಿ ದೌಲತರಾವ ಅವರನ್ನ ಕೌಲೆತ್ತರಾವ ಮಾಡಿ, ಒಂದೊಂದ ಪ್ರಾಂತದೊಳಗಿನ ಒಬ್ಬೊಬ್ಬ ಮಂತ್ರಿಯನ್ನ ತತ್ತರಮಾಡಿ, "ಫುಡ್‌ಡೈರೆಕ್ಟರ"-ಏನಂತೀರಿ ಆದಕ್ಕ ?. ಅನ್ನದ ಆಫೀಸರ ಅಗ್ಲಿ—ಅಂಥಾ ಚಾಗಾ ಮಾಡೋದು ಏನು ಹರಕತ್ ಆಗಿತ್ತು ಜನಾ ಪರಲಾಲರಿಗೆ? ಬೆಳೆಯೋ ಭೂಮಿ ಬೆಳೀತವ, ದುಡಿಯೋ ರೈತರು ದುಡೀತಾರ, ಹೆಚ್ಚು ಬರುವಲ್ಲಿ ಮಾರತಾರ, ಈ ಕಡೆ ರೈತರಿಗೆ ರೊಕ್ಕ— ಈ ಕಡೆ ದಲ್ಲಾಲರಿಗೆ ರೊಕ್ಕ— ಈ ಕಡೆ ಆಫೀಸರರಿಗೆ ರೊಕ್ಕ— ಹೀಂಗ ರೊಕ್ಕ ಹಂಚುವಂತೆ ಹೋಗೋದು ಸಮಾಜವಾದ ಅದೀತು ಅಂತ ತಿಳಿಸ್ತೀನಿ ಕಾಂಗ್ರೆಸದ ಮುಖ್ಯ ಮಂತ್ರಿಗೆ? ಅಲ್ಲ-ದೇಶಕ್ಕೇನು ಸ್ವಾತಂತ್ರ್ಯ ಸಿಕ್ಕಿದೆ ಇಲ್ಲೊ ಅಂತೀನಿ! ಬೇಕಾದವರು ತಿಂದು ಬದುಕುತಾರ. ಅದನ್ನೆಲ್ಲಾ ಬಿಟ್ಟು ಎಲ್ಲಾರಿಗೂ ತಿನ್ನಲಿಕ್ಕೆ ಸಿಕ್ಕಬೇಕು, ಎಲ್ಲಾರೂ ಬದುಕಬೇಕು ಅನ್ನೋ ಜುಲುಮು ಯಾಕ-ಅಂತೀನಿ? ಸರಕಾರದ ಎದುರು ಮಾತಾಡೊ ನೀ ಯಾರು-ಅನ್ನಬ್ಯಾಡೀ. ದೇಶದಾಗ ಕೋಟಿಗಟ್ಟಲೆ ಜನರು ಮೆಂಬರ ಆಗಿ ಸಂಘಟನಾ ಮಾಡಿದ ತಿರುಕಸಂಘದ ತಿರುಕಪ್ಪ ನಾ ಹೆದರೋ ಬೆಪ್ಪ ಅಲ್ಲ!

× × ×

## ಪ್ರಚಂಡ ಪ್ರತ್ಯುತ್ತರ

"ನೀವೆಲ್ಲರೂ 'ಪ್ರತ್ಯುತ್ತರ, ಹೇಡಿಗಳಿದ್ದೀರಿ" ಎಂದು ಮಹಾಮಂತ್ರಿ ಪಂಡಿತ ಜವಾಹರರು ಕಲಕತ್ತೆಯ ಕಾಂಗ್ರೆಸಿಗರ ಮೇಲೆ ಆರ್ಭಟಿಸಿದರಂತೆ. ಪಂಡಿತರ ಸಿಟ್ಟು ತೆಂಡವಂತಹದು. ಆದ್ದರಿಂದ ಸಿಟ್ಟಿನ ಭರದಲ್ಲಿ ತಿರುವು-ಮುರುವು ವಾದ ಅಗಾಧ ಶಕ್ತಿಶಕ್ತಿ ಬಾಯಿಯಿಂದ ಹೊರಬೀಳುವುದು. ತಿರುವು-ಮುರುವು ಅಲ್ಲದೆ ಮತ್ತೇನು? ಸ್ವಾತಂತ್ರ್ಯ ಯುದ್ಧದ ವೀರರಿಗೆ ಹೇಡಿಗಳೆನ್ನಬಹುದೆ? ಅಲ್ಲ, ಬ್ರಿಟಿಶರ ವಿರುದ್ಧ ತೋರಿಸಿದ ಶೌರ್ಯವನ್ನ ನಮ್ಮವರ ಎದುರಿನಲ್ಲೂ ತೋರಿಸಬೇಕೆಂಬ ಹಟವೇಕೆ? ಹಾಗೆ ಕೇಳಿದರೆ ಇಂದು ಕೆಲವು ಕಾಂಗ್ರೆಸಿಗರು ಧೈರ್ಯದ ಉಚ್ಚ ಶಿಖರವನ್ನೇರಿದ್ದಾರೆ. ಮಹಾತ್ಮರು ಮರೆಯಾದ ಅಲ್ಪಾವಧಿಯಲ್ಲಿಯೆ ಅವರು ಕಾಂಗ್ರೆಸಿಗೆ ಒದಗಿಸಿಕೊಟ್ಟ ಹೆಸರನ್ನು ಹೇಳ ಹೆಸರಿಲ್ಲದಂತೆ ಮಾಡುವದು ಸಾಮಾನ್ಯ ಶೌರ್ಯವೆ? ಇಪ್ಪತ್ತೈದು ಮೂವತ್ತು ವರ್ಷಗಳ ವರೆಗೆ ಅಖಂಡವಾಗಿ, ಸತತವಾಗಿ ಆಚರಿಸಿದ ನಿಃಸ್ವಾರ್ಥವನ್ನು ಒಮ್ಮೆಲೆ ಬಿಟ್ಟುಕೊಡುವುದು ಹೇಡಿಗೆ ಶಕ್ಯವಿಲ್ಲ. ಬೇಕಾದರೆ ಸುಪ್ರಸಿದ್ಧ ಚಿಕಿತ್ಸಕರಾದ ಡಾ. ಬಿ. ಸಿ. ರಾಯರನ್ನು ಕೇಳಬಹುದು, ರೋಗಿಯೂ ಅನೇಕ ವರ್ಷಗಳ ಅಭ್ಯಾಸವನ್ನು ಒಮ್ಮೆಲೆ ಬಿಡಬಲ್ಲನೆ—ಎಂದು. ಹಾಗೆ ಕೇಳಿದರೆ, ಪಂಡಿತರ ಈ ಅಬ್ಬರಕ್ಕೆ ಕಾರಣವೆಂದರೆ ದಕ್ಷಿಣ ಕಲಕತ್ತೆಯ ಉಪಚುನಾವಣೆ. ಅದಕ್ಕೆ ಹುರಿಯಾಳಾದವರು ದಾಸರು. ದಾಸರು ಈಶರಂತೆ ಧೈರ್ಯ-ಸ್ಥೈರ್ಯಗಳನ್ನು ತೋರಿಸಬೇಕೆಂದು ವಾದಿಸುವುದು ತಿರುವು-ಮುರುವಲ್ಲವೆ? ದಾಸರು ಕೂಡ ಕೊನೆಗೆ - ಎಂದರೆ ಪಂಡಿತರು ಕಲಕತ್ತೆಯನ್ನು ಬಿಟ್ಟು ದಿಲ್ಲಿಯನ್ನು ಮುಟ್ಟಿದ ಮೇಲೆ—ಸ್ಪಷ್ಟವಾಗಿ ಹೇಳಬೇಕಾಯಿತು. ಈ ಪ್ರಚಂಡ ಪುಕ್ಕತನವೂ ಶೌರ್ಯದ ಒಂದು ಮಾದರಿ ಎಂದೇ ಹೇಳಬಹುದಲ್ಲ? ನಾಲ್ಕು ಜನ ಒಪ್ಪಿದರೆ, ಮಾತ್ರ.

× × ×

## ತಲೆ ತಿನ್ನುವ ಬರಿತಲೆ

ಪತಿಯಾಲಾ ಮತ್ತು ಪೂರ್ವ ಪಂಜಾಬ ಸಂಸ್ಥಾನಕೂಟ ಪ್ರದೇಶದಲ್ಲಿದ್ದ ರಾಜಪುರ ಎಂಬಲ್ಲಿ ಪೋಲೀಸ ಸಬ್ ಇನ್‌ಸ್ಪೆಕ್ಟರನು ಬರಿತಲೆಯವರನ್ನು ಒಳಗೆ ಬಿಡಲಿಲ್ಲವಂತೆ. ಹಾಗೆ ಬಂದರೆ ಅವರ ಮೇಲೆ ಕ್ರಮವನ್ನು ತೆಗೆದುಕೊಳ್ಳಲಾಗುವುದೆಂದು ಹೆದರಿಸಿ ಅವರನ್ನು ಟೊಪ್ಪಿಗೆ ಹಾಕಿಕೊಂಡು ಬರಹೇಳಿ ಹೊರದೂಡಿಸಿದನಂತೆ.

ಸ್ವತಂತ್ರ ಹಿಂದುಸ್ತಾನದಲ್ಲಿ ಇದೇನು ಪೋಲೀಸ ರಾಜ್ಯ-ಎಂದು ತಿರುವು-ಮುರುವು ವಾದಿಸಬೇಡಿರಿ. ಪಾಪ! ಸಬ್ ಇನ್‌ಸ್ಪೆಕ್ಟರನೂ ಸ್ವತಂತ್ರನಾಗಿದ್ದಾನೆ. ಇಷ್ಟೆ ಅಲ್ಲ, ಅಲ್ಲಿ ಬಂದವರಿಗೆ ಟೊಪ್ಪಿಗೆ ಇಲ್ಲದಿದ್ದರೂ ಸಬ್ ಇನ್‌ಸ್ಪೆಕ್ಟರನಿಗೆ ತಲೆ ಇದೆ ಎಂದೂ ಹೇಳಬಹುದು. ಸ್ವತಂತ್ರನಾದ ಅವನು ಈಗ ಪಾಪಿಗೆ ನೋಡಿ ಕಾಲು ಬಾಯು-ಅಲ್ಲಲ್ಲ, ಟೊಪ್ಪಿಗೆ ನೋಡಿ ಕೈಬಾಚಬೇಕಾಗಿದೆ. ಆದರೆ ಟೊಪ್ಪಿಗೆಯೂ ಇಲ್ಲದಿದ್ದರೆ ಬಂದವರು ಯಾರು ಎಂದು ಅವನಿಗೆ ತಿಳಿಯುವುದು ಹೇಗೆ? ಇವನ್ನು ಬಂದವರಿಲ್ಲಾದರೂ ಎಂತಹ ದುರವಸ್ಥೆ! ಸಂಸ್ಥಾನ ರಾಜ್ಯ ಮುಗಿಯಿತೆಂಬ ಉತ್ಸವದಲ್ಲಿ ಇವನ್ನು ತಲೆ ಎತ್ತಿ ನಡೆಯಬಹುದೆಂದೋ ತಲೆ ಇದೆ ಎಂದು ತೋರಿಸಬೇಕೆಂದೂ ಅವರು ಬರಿತಲೆಯಿಂದ ಬಂದಿದ್ದಾರೆ. ಇದೂ ಅಲ್ಲದೆ ಅವರು ಟೊಪ್ಪಿಗೆಯನ್ನೆ ಹಾಕುವುದಾದರೆ ಯಾವುದು? ಬಿಳಿ ಟೊಪ್ಪಿಗೆಯನ್ನೊ? ಆದರೆ "ಶುದ್ಧೀಕರಣ"ದ ವಾತಾವರಣದಲ್ಲಿ ಆ ಟೊಪ್ಪಿಗೆಯು ಉಪಯೋಗವೇನು? ಕರಿ ಟೊಪ್ಪಿಗೆಯನ್ನು ಹಾಕಬೇಕೆ?-ಹಾಗೆ ಮಾಡಿದರೆ, "ಟೊಪ್ಪಿಗೆ ಹಾಕುವ" ಕಪ್ಪು ಸಂತೆ (Black market) ಯ ಸಂಬಂಧ ತಗಲೀತೆಂಬ ಹೆದರಿಕೆ? ಎರಡನ್ನು ಬಿಟ್ಟು ಕೆಂಪು ಮೂದಿಯದನ್ನು ಹಾಕುವುದಾದರೆ ಆರ್. ಎಸ್. ಎಸ್. ದ ಮೈಲಿಗೆಯ ಹೆದರಿಕೆ! ಎಂತಹ ದುರವಸ್ಥೆ! ಹಾಳು ತಲೆ ಸುಟ್ಟುಹೋಗಲಿ ಎಂದು ಸಿಟ್ಟಿನಿಂದ ಅವರು ಬರಿ ತಲೆಯಿಂದ ಬಂದಿರಬಹುದೆ? ತುಂಬಿದ ತಲೆಗೂ ತೋಚದ ಗೂಢವಾಗಿದೆ ಇದು.

× × ×

## ಬಂಗಾಲದಲ್ಲಿ ಧೃತರಾಷ್ಟ್ರ ?

ಬಂಗಾಲದ ಮುಖ್ಯ ಮಂತ್ರಿಗಳಾದ ಡಾ. ಬಿಧನಚಂದ್ರ ರಾಯರು ಕಣ್ಣಿನ ಉಪಚಾರಕ್ಕಾಗಿ ಯುರೋಪಕ್ಕೆ ಹೋಗಿದ್ದಾರೆಂದು ಸುದ್ದಿಯನ್ನು ಓದಿ ತಿರುಕಪ್ಪನಿಗೆ ಆಶ್ಚರ್ಯವಾಯಿತು. ಡಾ. ರಾಯರು ಹೋದುದಕ್ಕಲ್ಲ, ಪಶ್ಚಿಮ ಬಂಗಾಲದ ಬಗ್ಗೆ ವರ್ಕಿಂಗ ಕಮಿಟಿಯವರು ಮಾಡಿದ ಗೊತ್ತುವಳಿಯನ್ನು ನೋಡಿ ಮುಖ್ಯ ಮಂತ್ರಿಗಳ ಕಣ್ಣು ಕೆಟ್ಟಿರುವಾಗ ಪ್ರಾಂತದಲ್ಲಿ ನಡೆದದ್ದು ಅವರಿಗೆ ಕಾಣಿಸುವುದು ಹೇಗೆ? ನಾಳೆ ದೃಷ್ಟಿಯನ್ನು ಸರಿಪಡಿಸಿಕೊಂಡು ಬಂದ ನಂತರ ಅವರಿಗೆ ವರ್ಕಿಂಗ ಕ. ಗೊತ್ತುವಳಿ ಕಾಣಿಸಬಹುದು. ಅಲ್ಲಿಯ ವರೆಗಾದರೂ ಕಾಂಗ್ರೆಸದ ಹಿರಿಯರು ತಡೆಯಬಹುದಾಗಿತ್ತಲ್ಲ? ಅಥವಾ ತಡೆದರೆ, ಕಣ್ಣೀರು ಸುರಿಸುವ ಪರಿಸ್ಥಿತಿ ಒದಗಿ ಎಲ್ಲರ ಕಣ್ಣು ಕೆಡಬಹುದೆಂಬ ಹೆದರಿಕೆಯೆ? ನಡೆದುದನ್ನು ನೋಡಿಯೆ ಡಾ. ರಾಯರ ಕಣ್ಣು ಕೆಟ್ಟಿರಬಹುದೆಂಬ ಮಾತಿನಲ್ಲಿ ತಿರುಕಪ್ಪನ ವಿಶ್ವಾಸವಿಲ್ಲ. ಹಾಗಿದ್ದರೆ ಭಾರತರಾಷ್ಟ್ರವೆ ಧೃತರಾಷ್ಟ್ರವಾಗಬಹುದಾಗಿತ್ತು!

---

● ಅಜಮೀರ ರೇಲ್ವೆ ನಿಲ್ದಾಣದಲ್ಲಿ ಒಬ್ಬ ಮುಸ್ಲಿಮನನ್ನು ಬಂಧಿಸಲಾಯಿತು. ಅವನು ಸಿಂಧದ ನವಾಬಶಾ ಎಂಬಲ್ಲಿಂದ ಬಂದು ಭೂತಾನಿಯೆಂಬ ಹೆಸರಿಂದ ಹಿಂದೂ ನಿರಾಶ್ರಿತನೆಂದು ನಟಿಸುತ್ತ ರೇಲ್ವೆ ವರ್ಕಶಾಪಿನಲ್ಲಿ ನೌಕರಿ ಹಿಡಿದಿದ್ದುದರಿಂದ ಅವನು ಪಾಕಿಸ್ತಾನದ ಗುಪ್ತಚರನೆಂದು ಸಂಶಯಪಡಲಾಗಿದೆ.

---

## ನಾಡದೇವಿ

ನಾಡದೇವಿಯ ಗುಡಿಯು
ಅಡಿಯಾಳದ ಮುಚ್ಚಿ ಹೀ
ಹೃದಯಮಣಿ ತೆರೆದು ತೋರು
ವಿಮಲ ಹೃದಯದ ಹಾಸ್ಯ
ಭಕ್ತಿರಸಗಳು ಪಾತ್ರ,
ಬಳಿ ಬಂದಿಹೆ? ಎದೆಯ ದೇಗುಲ ಕೀರು,
ಬಿಚ್ಚಿ ಕೈಮುಗಿದರು—
ಬಾಳಿನ ಹೊಳ್ಳುಗಳು
ನಿಜವಿಹುದು, ತೋರದೇಕೆ ಒಮ್ಮೆ
ತೆರೆದು!

ಆ ಮಹಾತ್ಮನ ಪಾದ
ಯಂತ್ರರಂಗದ ಮರೆದು
ಈ ಮಹಾ ದೇಗುಲ ಬಂದ
ರೇಸದುದು?
ಹಣೆಗೆ ಕೈ ಹಚ್ಚದು ಕುಸಿ
ಬೀಳುತ್ತಲಿಹೆಯೇಕೆ?
ಹೃದಯ ಹಿಂಜರಿಯುವುದೆ ಹೊರಗೆ
ಬರದು?
ದೇವಿ ಪೊಳ್ಳುಗಳು ಬಯಲು
ಆಡಂಬರವನಿದನು,
ಅಸ್ಪೃಶ್ಯರ ಶಿವಗಿನ್ನು ಹಿಂದಿರುಗಲು!
ಎಂತು ಜನತನ್ನು ಧರ್ಮ
ಗುಡಿಯ ಬಾಗಿಲ ಬಳಿಯೆ
ನಿಂದು ಜಯ ಜಯವೆಂದು ಕೂಗು
ತಿಹುದು!
ಬರಿಯೆ ಬಾಯ್ಗಳ ಕೂಗು!
ಒಬ್ಬೊಬ್ಬರೆದೆಯಲ್ಲಿ
ಜಯಜಯದ ನುಡಿ ತಾನು
ಧ್ವನಿಸುತಿಹುದು
ಈ ಹೀನಗತಿಯಂತು
ಭಾರತೀಯಗೆ ಬಂತು!
ಸ್ವಾತಂತ್ರ್ಯ ದೊರೆತೊಡನೆ ಸ್ವಾರ್ಥ
ಬಲಿತು
ಒಡಹುಟ್ಟಿದವರಲ್ಲಿ
ಒಡಕು ತಾ ಬೆಳೆದಿಹುದು!
ಇಂತಿಹುದು ಹುಳುಕು ಹೃದಯದ
ಸುತ್ತುಮುತ್ತು!
ಅರಿತಿರಿ ಬಂಧುಗಳೆ,
ಬಿಡುಗಡೆಯ ಬೆಲೆಯು ಇದು-
ಜೀವನದಿ ಭಾವನೆಗಳೊಳ್ಳಿತಿರಲಿ,
ಕುಲವೆಂದು, ಮತವೆಂದು
ಮಲಿನತೆಗೆ ಸಿಲುಕದಿರಿ.
ಇಂಥ ಪಾವನ ಹೃದಯ ಗುಡಿಗೆ ಬರಲಿ

— ಪಿ. ಟಿ. ಕುಲಕರ್ಣಿ

---

● ಭಾರತದಿಂದ ಫಲವಸ್ತುಗಳನ್ನು ಇನ್ನು ಮುಂದೆ ವಿಮಾನ ಮೂಲಕ ವಿದೇಶಗಳಿಗೆ, ಮುಖ್ಯವಾಗಿ ಬ್ರಿಟನ್ನಿಗೆ, ಕಳಿಸಲಾಗುವದು. ಈ ವರೆಗೆ ಮಾವಿನ ಹಣ್ಣು ಹೊರತು ಉಳಿದ ಹಣ್ಣುಗಳ ನಿರ್ಯಾತಕ್ಕೆ ಪ್ರತಿಬಂಧವಿತ್ತು. ಆದರೆ ಇದರಿಂದ ಹಣ್ಣುಗಳು ಗಿರಾಕಿಗಳಿಲ್ಲದೆ ಕೊಳೆಯುತ್ತಿದ್ದರಿಂದ ಪ್ರತಿಬಂಧವನ್ನು ಎತ್ತಲಾಗಿದೆ.



ಬ್ರಿಟನ್ನಿನಿಂದ ಈಚೆಗೆ ಭಾರತ ನೌಕಾ ಪಡೆಗಾಗಿ ಕೊಂಡುಕೊಳ್ಳಲಾದ "ರಣಜಿತ" ವಿನಾಶಿಕೆಯನ್ನು ಭಾರತದ ಹೈಕಮಿಶನರ ಶ್ರೀ ವಿ. ಕೆ. ಕೃಷ್ಣ ಮೆನನ್ನರ ಕೈಗೆ ಒಪ್ಪಿಸುವದು. ಪಾಟಸ್ಮಾಥ ಬಂದರದಲ್ಲಿ ತೆಗೆದ ಚಿತ್ರ.

## ಸಮಸ್ತ ಭಾರತ

### ಮುಂಬಯಿ

ಭಾರತದ ದ್ವಿತೀಯ ಸ್ವಾತಂತ್ರ್ಯ ದಿನಾಚರಣೆಯ ನಿಮಿತ್ತ ಸಿದ್ಧಪಡಿಸಲಾದ ಹೊಸ ಅಂಚೆ ತಿಕೀಟುಗಳನ್ನು ಬೇರೆ ಬೇರೆ ಭಾಗದ ೨೫ ಕೇಂದ್ರಗಳಿಗೆ ಕಳಿಸಲಾಗಿದೆ. ಮುಂಬಯಿ ಅಂಚೇ ಕಚೇರಿಗೆ ಮುಪ್ಪರ ೫೦ ಲಕ್ಷ ಅಂಚೆ ತಿಕೀಟುಗಳನ್ನು ತಪ್ಪಿಸಿಪಡಿಸುವದಕ್ಕಾಗಿ ಅಂಚೆ ತಿಕೀಟು ಬಂದಿದೆ. ಆನೆಯ ಮುಖ ಮತ್ತು ಸ್ವಾತಂತ್ರ್ಯ ದಿನ ಅಗಸ್ಟ ೧೫ ಎಂಬ ಅಕ್ಷರಸೊಳಗೊಂಡ ಹೊಸ ಮುದ್ರೆಯನ್ನು ಉಪಯೋಗಿಸಲಾಗುವದು;

ಪಾಕಿಸ್ತಾನದಿಂದ ಬಂದಿರುವ ೧॥ ಲಕ್ಷ ಜನ ನಿರಾಶ್ರಿತರಿಗಾಗಿ ಮುಂಬಯಿಯಿಂದ ಉತ್ತರಕ್ಕೆ ೩೬ ಮೈಲು ದೂರದಲ್ಲಿ ಕಲ್ಯಾಣದ ಬಳಿ ಹೊಸ ನಗರವೊಂದನ್ನು ಕಟ್ಟಲಾಗುವದು. ಇದೇ ಲಕ್ಕೆ ಗವರ್ನರ: ಜನರಲ್‌ರು ಇದರ ಶಂಕುಸ್ಥಾಪನೆಯನ್ನು ಮಾಡುವರು. ಇದಕ್ಕೆ ಉಲ್ಲಾಸ ನಗರವೆಂದು ಹೆಸರಿಡಲಾಗುವದು. ೩೦೦೦ ಎಕರೆ ಪ್ರದೇಶದಲ್ಲಿ ಈ ನಗರವನ್ನು ಕಟ್ಟಲಾಗುತ್ತದೆ.

ಮುಂದಿನ ಅವಧಿಯಲ್ಲಿ ಸಕ್ಕರೆ ಬೆಲೆಯನ್ನು ಕಡಮೆ ಬೆಲೆಗೆ ಗೊತ್ತುಪಡಿಸಬೇಕೆಂದು ಮುಂಬಯಿ ಸಕ್ಕರೆ ವ್ಯಾಪಾರಸ್ಥರ ಸಂಘದ ಅಧ್ಯಕ್ಷರು ಸೂಚಿಸಿರುವರು- ಸ್ಟರ್ಲಿಂಗ ಪ್ರದೇಶಗಳಿಂದ ಕಡಮೆ ಬೆಲೆಗೆ ಒಂದು ಲಕ್ಷ ಟನ್ನಗಳ ವರೆಗೆ ಸಕ್ಕರೆ ನಿರ್ಯಾತ ಮಾಡಲು ಅಪ್ಪಣೆ ಕೊಡಬೇಕೆಂದೂ ಅವರು ಕೇಳಿಕೊಂಡರು.

ಇದೇ ಸಪ್ಟಂಬರ ೨೫ ರಂದು ಪ್ರಾಂತದಲ್ಲೆಲ್ಲ ಹರಿಜನ ದಿನವನ್ನಾಚರಿಸಬೇಕೆಂದೂ ಅಸ್ಪೃಶ್ಯತೆಯ ನಿವಾರಣೆಯಲ್ಲಿ ಆಸಕ್ತರಿರುವ ಸಾಮಾಜಿಕ ಕಾರ್ಯಕರ್ತರು ಹಾಗು ಸಾರ್ವಜನಿಕ ಸಂಸ್ಥೆಗಳು ಸಹಕಾರದಿಂದ ಸಭೆ ಮೊದಲಾದ ಕಾರ್ಯಕ್ರಮಗಳನ್ನು ನಡೆಸಬೇಕೆಂದೂ ಮುಂಬಯಿ ಸರಕಾರವು ಆಜ್ಞಾಪಿಸಿದೆ.

ಮುಂಬಯಿ ಪ್ರಾಂತದಲ್ಲಿ ಸಮುದ್ರತೀರದಲ್ಲಿರುವ ೫ ಜಿಲ್ಹೆಗಳಲ್ಲಿ ೨ ಲಕ್ಷ ಎಕರೆ ಖಾರಭೂಮಿಯು ಪಡಬಿದ್ದದ್ದು ಅದನ್ನು ಒಂದು ಕೋಟಿ ರೂಪಾಯಿಗಳ ವೆಚ್ಚದಿಂದ ಸಾಗುವಳಿಗೆ ತರಲು ಮುಂಬಯಿ ಸರಕಾರವು ಯೋಜಿಸಿದೆ. ಇನ್ನು ಎರಡು ಮೂರು ವರುಷಗಳಲ್ಲಿ ಈ ಭೂಮಿಯಲ್ಲಿ ೬೦ ಸಾವಿರ ಟನ್ನ ಅಕ್ಕಿ ಬೆಳೆಯಬಹುದೆಂದು ನಿರೀಕ್ಷಿಸಲಾಗಿದೆ. ಸರಕಾರವು ೪೦ ರಷ್ಟು, ಒಡೆಯರು ೪೦ ರಷ್ಟು ಮತ್ತು ರೈತರು ೨೦ ರಷ್ಟು ಸಾಗುವಳಿ ವೆಚ್ಚವನ್ನು ವಹಿಸತಕ್ಕದ್ದು.

ಮುಂಬಯಿ ಸರಕಾರದ ಗೃಹಮಂತ್ರಿಗಳಾದ ಮುರಾರಜಿಯವರು ಲೋಕಮಾನ್ಯರ ಪುಣ್ಯತಿಥಿಯ ನಿಮಿತ್ತ ಮುಂಬಯಿಯಲ್ಲಿ ಭಾಷಣ ಮಾಡುತ್ತ ವಿನಾಶಕರ ಟೀಕೆಯನ್ನು ನಿಲ್ಲಿಸಬೇಕೆಂದು ಸಾರ್ವಜನಿಕರಿಗೆ ಬಿನ್ನವಿಸಿಕೊಂಡದ್ದಲ್ಲದೆ ಸ್ವಾತಂತ್ರ್ಯದ ಸ್ಥಿರೀಕರಣಕ್ಕಾಗಿ ಸರಕಾರದೊಡನೆ ಸಹಕರಿಸಬೇಕೆಂದೂ ಕೇಳಿಕೊಂಡರು. ಶ್ರೀ ಎಸ್. ಕೆ. ಪಾಟೀಲರು ಅಧ್ಯಕ್ಷತೆ ವಹಿಸಿದ್ದರು.

### ಮಾದ್ರಾಸ

ಮದರಾಸ ಮಂತ್ರಿಗಳ ಪ್ರಕರಣದಲ್ಲಿ ಯಾರ ಮೇಲಿನ ಆರೋಪಗಳನ್ನೂ ಹಿಂತೆಗೆದುಕೊಂಡಿಲ್ಲ ಎಂದು ಮದರಾಸಿನ ಹಿಂದಿನ ಮುಖ್ಯ ಮಂತ್ರಿ ಶ್ರಿ ಟಿ. ಪ್ರಕಾಶಂ ಇವರಿಗೆ ಮುಖ್ಯ ಮಂತ್ರಿ ಪಂಡಿತ ಜವಾಹರಲಾಲರು ತಂತಿ ಮೂಲಕ ತಿಳಿಸಿದ್ದಾರೆ.

ಮೆಕ್ಸಿಕೋದಕ್ಷಿಣ ರೇಲ್ವೆ ಆಡಳತೆಯನ್ನು ರೇಲ್ವೆ ಕೆಲಸಗಾರ ಸಂಘದವರಿಗೆ ಒಪ್ಪಿಸಿಕೊಡಲಾಗಿರುವಂತೆ ಹಿಂದುಸ್ತಾನ ಸರಕಾರದವರು ಎಲ್ಲ ರೇಲ್ವೆಗಳ ಆಡಳತೆಯನ್ನು ಆಯಾ ರೇಲ್ವೆ ಕೆಲಸಗಾರ ಪ್ರತಿನಿಧಿಗಳಿಗೇ ಒಪ್ಪಿಸಿದ್ದಾದರೆ ಹೆಚ್ಚು ಕಾರ್ಯಕ್ಷಮವಾಗಿ ಮತ್ತು ಯಶಸ್ವಿಯಾಗಿ ಆಡಳತೆಯನ್ನು ನೋಡಿಕೊಂಡು ಹೋಗಲು ಅನುಕೂಲವಾಗುವದೆಂದು ಮುಂತಾಗಿ ಎಂ. ಎಸ್. ಎಂ. ರೇಲ್ವೆ ಕೆಲಸಗಾರ ಸಂಘವು ಗೊತ್ತುವಳಿ ಪಾಸುಮಾಡಿದೆ.

ನಿರ್ಯಾತ ಸರಕುಗಳನ್ನು ಪೂರಾಟಕರದಿಂದ ಹೊರತುಪಡಿಸಬೇಕೆಂಬ ಭಾರತ ಸರಕಾರದ ಸೂಚನೆಗೆ ಮದರಾಸ ಸರಕಾರವು ಒಪ್ಪಿದೆಂದು ಮದರಾಸ ಮಂತ್ರಿಗಳಾದ ಗೋಪಾಲ ರೆಡ್ಡಿಯವರು ಸಾರಿದರು.

### ಹೊಸದಿಲ್ಲಿ

ಗಾಂಧೀ ಕೊಲೆಯ ಖಟ್ಲೆಯ ಆರೋಪಿಗಳಲ್ಲಿ ಒಬ್ಬರಾದ ಡಾ. ಪರಚುರೆಯವರು ನಿರ್ದೋಷಿಗಳೆಂದು ಪಂಜಾಬ ಹಾಯಕೋರ್ಟಿನವರು ನಿರ್ಣಯ ಕೊಟ್ಟದ್ದರಿಂದ ಅವರನ್ನು ಬಿಡುಗಡೆ ಮಾಡಲಾಯಿತು. ಆದರೆ ಅವರು ಮಧ್ಯ ಭಾರತ ಸಂಸ್ಥಾನ ಒಕ್ಕೂಟದ ಗ್ವಾಲೇರ, ಉಜ್ಜಯಿನಿ ಮತ್ತು ಇಂದೂರ ಮೊದಲಾದ ೯ ಜಿಲ್ಹೆಗಳಲ್ಲಿ ಪ್ರವೇಶ ಮಾಡಬಾರದೆಂದು ವಿಧಿಸಲಾಗಿದೆ.

ಹಿಂದುಸ್ತಾನ ಸರಕಾರದವರು ೧೯೫೦ ನೇ ಎಪ್ರಿಲ ೧ ರೊಳಗಾಗಿ ಸೌರಾಷ್ಟ್ರದ ೧೨೦೦ ಮೈಲು ಮೀಟರಗೇಜ ರೇಲ್ವೆಯ ಆಡಳತೆಯನ್ನು ವಹಿಸಿಕೊಳ್ಳುವರು. ಸೌರಾಷ್ಟ್ರದ ಪೂರ್ಣ ರೇಲ್ವೆಯನ್ನು ತೆಗೆದುಕೊಳ್ಳುವದರ ಪ್ರಾಥಮಿಕ ಕ್ರಮವಿದೆಂದು ಹೀಗೆ ಮಾಡಲಾಗಿದೆ.

ಅಂತರ ಪಾರ್ಲಮೆಂಟರಿ ಸಂಘದ ೩೮ ನೇ ಪರಿಷತ್ತು ಸ್ಟಾಕಹೋಮದಲ್ಲಿ ಸಪ್ಟಂಬರ ೬ಕ್ಕೆ ಪ್ರಾರಂಭವಾಗಲಿದ್ದು ಹಿಂದೀ ಪಾರ್ಲಮೆಂಟರಿ ಗುಂಪಿನ ಶಿಷ್ಟಮಂಡಲವು ದಿಲ್ಲಿಯಿಂದ ಸಪ್ಟಂಬರ ೨ಕ್ಕೆ ಪ್ರಯಾಣ ಬೆಳೆಸುವರು. ಶ್ರೀ ಮೋಹನಲಾಲ ಗೌತಮ, ತಾಜಮುಲ್ಲ ಹುಸೇನ, ಎಂ. ಎಸ್. ಸ್ವಾಲ ಕೆ. ಹನಮಂತಯ್ಯ ಅವರು ಶಿಷ್ಟಮಂಡಲದ ಸದಸ್ಯರಾಗಿರುವರು.

ಹಿಂದುಸ್ತಾನ ಸರಕಾರದ ಸಿ ಆಯ ಡಿ ಶಾಖೆಯ ವರಿಷ್ಠರಾದ ಟಿ. ಜಿ. ಸಂಜೀವಿಯವರು ಲಂಡನದಿಂದ ಹಿಂತಿರುಗಿರುವರು. ಅವರು ಯುರೋಪ ಅಮೇರಿಕಗಳಲ್ಲಿ ಸಿ ಆಯ ಡಿ ಪದ್ಧತಿಯನ್ನು ಅಭ್ಯಸಿಸಲು ೮ ವಾರಗಳ ಹಿಂದೆ ಹೋಗಿದ್ದರು.

ಹಿಂದುಸ್ತಾನ ಸರಕಾರದವರು ನೇಮಿಸಿದ ಅಂಚೆ ತಜ್ಞರ ಸಮಿತಿಯವರು ೬ ದಿನಗಳ ಒಂದು ವಾರದಲ್ಲಿ ೪೪ ಗಂಟೆ ಕೆಲಸದ ಅವಧಿ ಇರಬೇಕೆಂದು ಸರಕಾರಕ್ಕೆ ಪುರಸ್ಕರಿಸಿರುವರೆಂದು ಅವರ ವರದಿಯಿಂದ ತಿಳಿದು ಬರುತ್ತದೆ.

ಅಂಚೆ ತಂತಿ ಶಾಖೆಯ ಇಬ್ಬರು ಅಧಿಕಾರಿಗಳಾದ ಪಿ. ಎಸ್. ಎಂ. ಸುಂದರಂ ಮತ್ತು ಸಿ. ಪಿ. ವಾಸುದೇವನ್ ಇವರಿಗೆ ಯುಕ್ತರಾಷ್ಟ್ರ ಸಂಘದ ಫೆಲೋಶಿಪ್ ದೊರೆತಿದ್ದು ಅವರು ಅಮೇರಿಕೆಯಲ್ಲಿರುವ ಟೆಲಿಫೋನ ಮತ್ತು ತಂತಿಯ ವ್ಯವಸ್ಥೆಯನ್ನು ಅಭ್ಯಾಸ ಮಾಡಲು ಇದೆ ೧೧ ಕ್ಕೆ ಅಮೇರಿಕೆಗೆ ಹೋಗುವರು.

ಗಾಂಧೀ ಕೊಲೆ ಖಟ್ಲೆಯ ಆರೋಪಕ್ಕೆ ಗುರಿಯಾಗಿರುವವರಲ್ಲಿ ಫರಾರಿಯಾಗಿದ್ದ ಮೂವರಲ್ಲಿ ಗಂಗಾಧರ ಸಖಾರಾಮ ದಂಡವತೆ ಇವನನ್ನು ಗ್ವಾಲೇರದಲ್ಲಿ ಒಂದನೇ ತಾರೀಕು ಮುಂಜಾನೆ ಸೆರೆ ಹಿಡಿಯಲಾಯಿತು. ಫರಾರಿಯಾದ ಇನ್ನಿಬ್ಬರ ಹೆಸರು ಗಂಗಾಧರ ಜಾಧವ ಮತ್ತು ಸೂರ್ಯದೇವ ಶರ್ಮ ಎಂದಿದೆ.

ಪೆಟ್ರೋಲ ಸೀದಾ ಇನ್ನು ಎರಡು ವರುಷಗಳ ವರೆಗೆ ಉಳಿಯುವದೆಂದು ತಿಳಿಯುತ್ತದೆ.

### ಪಾಕಿಸ್ತಾನ

ಪಾಕಿಸ್ತಾನದ ಮುಖ್ಯ ಮಂತ್ರಿಗಳಾದ ಲಿಯಾಕತ ಅಲ್ಲಿಖಾನರು ಇದೇ ನವಂಬರ ತಿಂಗಳು ಪೂರ್ವಾರ್ಧದಲ್ಲಿ ಮಾಸ್ಕೋಕ್ಕೆ ಭೆಟ್ಟಿ ಕೊಡಲಿರುವರೆಂದು ತಿಳಿಯುತ್ತದೆ. ಲಿಯಾಕತ ಅಲ್ಲೀಖಾನ ಹಾಗೂ ಅವರ ಪರಿವಾರದವರಿಗಾಗಿ ಸೋವಿಯೆಟ ಸರಕಾರವು ಕರಾಚಿಗೆ ಒಂದು ವಿಮಾನವನ್ನು ಕಳಿಸಲಿದೆ.

ಪಶ್ಚಿಮ ಪಂಜಾಬದ ಹಿಂದಿನ ಮಂತ್ರಿಗಳನ್ನೊಳಗೊಂಡು ಶಾಸನಸಭೆಯ ಹಿಂದಿನ ೬೧ ಸದಸ್ಯರ ಮೇಲೆ ಮಾಡಲಾದ ಆಪಾದನೆಗಳ ಸಂಬಂಧದಲ್ಲಿ ನಡೆಸಿದ. ಗುಪ್ತ ಪರಿಶೀಲನೆಯೆಲ್ಲ ಮುಗಿದು ೧೮ ಜನರನ್ನು ವಿಚಾರಣೆಗೆ ಗುರಿಪಡಿಸಬೇಕೆಂದು ವಿಧಿಸಲಾಗಿದೆ. ಇವರ ವಿರುದ್ಧ ಅಸ್ತಿಗಳ ಅಪರಾತಪರಾ ಸ್ಥಾನಮಾನಗಳ ದುರುಪಯೋಗ ಮೊದಲಾದ ಗಂಭೀರ-ಆರೋಪಗಳಿವೆ.

---

ಜಾಹಿರಾತು ಕರವು ಕೇಂದ್ರಕ್ಕೆ ಸೇರಬೇಕೇ ಪ್ರಾಂತಕ್ಕೆ ಸೇರಬೇಕೇ ಎಂಬ ಬಗ್ಗೆ ಘಟನೆಯನ್ನು ಬರೆಯುವ ಕರಡು ಸಮಿತಿಯಲ್ಲಿ ವಿಚಾರವಾಯಿತು. ಇದನ್ನು ಕೇಂದ್ರಕ್ಕೆ ಒಪ್ಪಿಸಬೇಕೆಂದು ಶ್ರೀ ಮುನಶಿಯವರು ವಾದಿಸಿದರು. ಆದರೆ ಸದ್ಯಕ್ಕೆ ಅದು ಪ್ರಾಂತಗಳಿಗೇ ಹೋಗಬೇಕೆಂದು ನಿರ್ಣಯಿಸಲಾಯಿತು.

### ಪ. ಬಂಗಾಲ

ಸಾಮ್ಯವಾದೀ ಪ್ರಜಾರಾಜ್ಯ ಪಕ್ಷದ ಸಂಸ್ಥಾಪಕ ಅಧ್ಯಕ್ಷರಾದ ಶ್ರೀ ಶರಚ್ಚಂದ್ರ ಬೋಸರು ತಮ್ಮ ೨॥ ತಿಂಗಳು ಯುರೋಪ ಸಂಚಾರವನ್ನು ಮುಗಿಸಿಕೊಂಡು ತಮ್ಮ ಪತ್ನಿ ಪುತ್ರರೊಂದಿಗೆ ಕಲಕತ್ತೆಗೆ ೨ಕ್ಕೆ ಬಂದರು. ವಿಮಾನ ನಿಲ್ದಾಣದಿಂದ ಅವರನ್ನು ಮೆರವಣಿಗೆಯಲ್ಲಿ ಕಲಕತ್ತೆಗೆ ಕರೆಕೊಂಡು ಬರಲಾಯಿತು.

ಕಾಂಗ್ರೆಸ ಕಾರ್ಯ ಸಮಿತಿಯವರು ಪಶ್ಚಿಮ ಬಂಗಾಲದಲ್ಲಿ ಚುನಾವಣೆಗಳನ್ನು ನಡೆಸಬೇಕೆಂದು ನಿರ್ಣಯಿಸಿದ್ದನ್ನು ಬಂಗಾಲ ಪಕ್ಷಿಯ ಎಲ್ಲ ಪಕ್ಷಗಳು ಸ್ವಾಗತಿಸುತ್ತವೆ. ಆದರೆ ಹಿಂದಿನ ಕಾಯಿದೆಯನ್ವಯ ಚುನಾವಣೆ ನಡೆಸುವದು ಪ್ರಜಾಪಕ್ಷಗಳಿಗೆ ಅನುಕೂಲವಾಗಿ ಹೇಳು ಜೌನ್ಯಂಪ್ರನಾಥ ಟಾಗೂರರ ಅಭಿಪ್ರಾಯ. ಕ್ರಾಂತಿಕಾರರೆಲ್ಲರೂ ಮುಂದೆ ಬಂದು ಜನತೆಯ ಅಧಿಕಾರಕ್ಕಾಗಿ ನಡೆದ ಹೋರಾಟವನ್ನು ಬಲಪಡಿಸಬೇಕೆಂದು ಜೀವನಲಾಲ ಚಟರ್ಜಿಯವರು ಅಭಿಪ್ರಾಯಪಟ್ಟರು.

೧೯೪೭ ರಲ್ಲಿ ಸ್ವಾತಂತ್ರ್ಯ ಸಂಪಾದನೆಯ ಅನಂತರ ಈವರೆಗೆ ಕಲಕತ್ತೆಯಲ್ಲಿಸಂಭವಿಸಿದ ರಾಜಕೀಯ ಗಲಭೆಗಳಲ್ಲಿ ೪೪ ಪೋಲೀಸ ಅಧಿಕಾರಿಗಳು ಮತ್ತು ಪೋಲೀಸರು ಗಾಯಗೊಂಡಿರುವರೆಂದು ತಿಳಿಯುತ್ತದೆ. ಇದರಲ್ಲಿ ಹೆಚ್ಚು ದುರ್ಘಟನೆಗಳು ಇದೇ ವರುಷದಲ್ಲಿಯೇ ಆಗಿದ್ದು ಜವಾಹರಲಾಲರು ಕಲಕತ್ತೆಗೆ ಬಂದಾಗಲೆ ೧೮ ಪೋಲೀಸರು ಗಾಯಗೊಂಡಿದ್ದರು.

ಈಗಿರುವ ಸಾತಂತ್ರ್ಯದ ನಿರರ್ಥಕತೆಯನ್ನು ವ್ಯಕ್ತಪಡಿಸಲು ದೇಶದಲ್ಲೆಲ್ಲ ಅಗಸ್ಟ ೧೫ ಕ್ಕೆ ಸಭೆಗಳನ್ನು ಮತಪ್ರದರ್ಶನಗಳನ್ನು ನಡೆಸಬೇಕೆಂದು ಎಡ ಪಕ್ಷಗಳ ಸಂಘಟನೆಯ ಕೇಂದ್ರ ಸಮಿತಿ ನಿರ್ಧರಿಸಿದೆ. ಎಲ್ಲ ಪ್ರಾಂತಗಳಲ್ಲಿಯ ಸಂಘಗಳಿಗೆ ಆ ರೀತಿ ಆದೇಶಿಸಲಾಗಿದೆ.

# ಕರ್ನಾಟಕದಲ್ಲಿ

## ಧಾರವಾಡ

ಶಿರಹಟ್ಟಿ ಲೋಕಮಾನ್ಯ ಧರ್ಮಾರ್ಥ ವಾಚನಾಲಯದ ೩೮ ನೇ ವಾರ್ಷಿಕೋತ್ಸವವು ಲೋಕಮಾನ್ಯರ ಪುಣ್ಯತಿಥಿಯ ದಿನ ಶ್ರೀ ...ಬಸಪ್ಪಾ ಮಿಸ್ಕಿನ್ ಇವರ ಅಧ್ಯಕ್ಷತೆಯಲ್ಲಿ ...ಗೊಂಡಿತು. ಆ ಕಾಲಕ್ಕೆ ಶ್ರೀ ನಾಯಕ ...ಕಟರಾಯರು ಭಾಷಣ ಮಾಡುತ್ತ ತ್ಯಾಗ. ...ಗಿಗಳ ಕಮನ್ನಯು ಮಾಡಿಕೊಂಡು ...ಲ್ಲರೂ ರಾಷ್ಟ್ರವನ್ನು ಸುಖಸಮೃದ್ಧ ...ಮಾಡುವತ್ತ ಪ್ರಯತ್ನಿಸಬೇಕೆಂದು ಮುಂತಾಗಿ ...ಹೇಳಿದರು. ಶಿರಹಟ್ಟಿ ತಾಲೂಕನ್ನು ಮಾಡಿದು ...ಕ್ಕಾಗಿ ಸರಕಾರವನ್ನು ಭಿನಂದಿಸಲಾಯಿತು.

ಧಾರವಾಡಕ್ಕೆ ಹೊಸದಾಗಿ ಕಲೆಕ್ಟರರಾಗಿ ...ಬಂದಿರುವ ಶ್ರೀ ಟಿ. ಎಂ. ಚೌಧರಿಯವರು ...ಕಳೆದ ೧ ನೇ ತಾರೀಕು ಪತ್ರಿಕಾ ಪರಿಷತ್ತನ್ನು ...ಕರೆದಿದ್ದರು. ಜಿಲ್ಲೆಯಲ್ಲಿ ಆಹಾರ ಪರಿಸ್ಥಿತಿ ...ತೃಪ್ತಿಕರವಾಗಿದೆ. ಅದರೂ ಪರದೇಶಗಳಿಂದ ...ಬಂದ ಗೋವಿನ ಜೋಳ ಮೊದಲಾದವುಗಳನ್ನು ...ಅನಿವಾರ್ಯವಾಗಿ ಕೊಡುವ ಪ್ರಸಂಗ ಬಂದಿದೆ. ...ಜ್ಜು ಆಹಾರ ಬೆಳೆಯಿರಿ ಕಾರ್ಯಕ್ರಮ ಭರ ...ದಿಂದ ಸಾಗಿದೆ ಎಂದು ಮುಂತಾಗಿ ಕಲೆಕ್ಟರರು ...ಪದ್ರಿಗಾರರಿಗೆ ತಿಳಿಸಿದರು. ಬಚ್ಚಿಟ್ಟ ಜೋಳ ...ವನ್ನು ಹೊರದೆಗೆಯಲು ಸಹಾಯ ಮಾಡಿದರೆ ...ಜ್ಜು ಜೋಳ ಕೊಡಲಾಗುವದೆಂದೂ ಹೇಳಿ ...ರು.

ಧಾರವಾಡ ಕರ್ನಾಟಕ ವಿದ್ಯಾವರ್ಧಕ ...ಸಂಘದ ವಾರ್ಷಿಕ ಸಭೆ ಜರುಗಿ ಶ್ರೀ ನಲವಡಿ ...ಯವರು ಅಧ್ಯಕ್ಷರು, ಶ್ರೀ ದೀಕ್ಷಿತರು ಕಾರ್ಯಾ ...ಧ್ಯಕ್ಷರು ಪಾ. ಕಮಲಾಪುರ ಮತ್ತು ಪ್ರೊ. ...ಮಳಗಿಯವರು ಕಾರ್ಯದರ್ಶಿಗಳು ಹಾಗು ...ಪ್ರೊ. ಮಾಳವಾಡರು ಕೋಶಾಧ್ಯಕ್ಷರಾಗಿ ಆರಿಸಿ ...ಲಪಟ್ಟರು. ವರದಿ ಲೆಕ್ಕಪತ್ರ ಮತ್ತು ಅಂದಾಜ ...ಪತ್ರಿಕೆ ಸ್ವೀಕೃತವಾದವು.

ಧಾರವಾಡ ಡಿವಿಜನಲ್ ವೆಟಿರ್ನರಿ ಅಧಿಕಾರಿ ...ಯಾಗಿದ್ದ ಶ್ರೀ ಉಳವಪ್ಪಾ ಯಲ್ಲಪ್ಪಾ ಗದಗ ...ಇವರನ್ನು ಸರಕಾರದವರು ಕಳೆದ ತಿಂಗಳು ...ಕೆಲಸದಿಂದ ತೆಗೆದುಹಾಕಿದ್ದು ಹೆಚ್ಚಿನ ವಿಚಾರಣೆ ನಡೆಯು ...ವದೆಯೆಂದು ತಿಳಿಯುತ್ತದೆ.

...ಪ್ರಾಂತದಲ್ಲಿಯ ಕ್ರಿಕೆಟ ಉತ್ಸಾಹಿಗಳ ಸರ್ವ ...ಸಾಧಾರಣ ಸಭೆಯು ಶ್ರೀ ಆರ್. ವಿ. ಶಿರೂರ ...ಇವರ ಅಧ್ಯಕ್ಷತೆಯಲ್ಲಿ ಹುಬ್ಬಳ್ಳಿಯಲ್ಲಿ ಸೇರಿ ...ಹೊಸದಾಗಿ ರಚಿಸಲಾದ ಕರ್ನಾಟಕ ...ಪ್ರಾಂತೀಯ ಕ್ರಿಕೆಟ ಸಂಘದ ಘಟನೆಯನ್ನು ...ಮಾನ್ಯ ಮಾಡಲಾಯಿತು. ಮದ್ರಾಸ ...ಮುಂಬಯಿ ಪ್ರಾಂತಗಳ ಕರ್ನಾಟಕ ಪ್ರದೇಶ ...ಗಳು ಕೊಡಗನ್ನು ಪ್ರತಿನಿಧೀಕರಿಸುವದು ...ಕೆಟ ಕಂಟ್ರೋಲ ಬೋರ್ಡಿನಲ್ಲಿ ಸಂಘವನ್ನು ...ಸೇರಿಸಿಕೊಳ್ಳಬೇಕು ಮತ್ತು ಕರ್ನಾಟ ...ಕ ಕ್ರಿಕೆಟ ಕಂಟ್ರೋಲ ಬೋರ್ಡಿನಲ್ಲಿ ಪ್ರತಿ ...ನಿಧಿತ್ವ ಕೊಡಬೇಕು ಮೊದಲಾದ್ದನ್ನು ಬೇಡ ...ಲಾಗಿದೆ.

## ವಿಜಾಪುರ

ಜಿಲ್ಹಾಧಿಕಾರಿಗಳಾದ ಶ್ರೀ ಸಾಲಧಾಣಾ ...ಸಾಹೇಬರು ಪತ್ರಿಕಾ ಪರಿಷತ್ತಿನಲ್ಲಿ ಆಹಾರ ...ಪರಿಸ್ಥಿತಿ ಸಮಾಧಾನಕರವಿದೆಯೆಂದು ಹೇಳಿ ...ದರು. ಈಗಿನ್ನ ಜೋಳ ಒಂದು ವರ್ಷ ...ಸಾಕಾಗುವಷ್ಟು ಇದ್ದು ಅಕ್ಕಿ ಮಾತ್ರ ಮೂರು ...ತಿಂಗಳು ಸಾಲುವಷ್ಟಿದೆ. ಗೋದಿ ೩೦ ಸಾವಿರ ...ಬಂದಿತು ಎಂದು ಹೇಳಿದರು. ೩೦ ಸಾವಿರ ...ಬಿಳೆ ಜೋಳ ೧೦ ಸಾವಿರ ಚೀಲ ಶೆಜ್ಜೆಯನ್ನು ...ಬಿಜಾಪುರ, ಧಾರವಾಡ ಜಿಲ್ಲೆಗಳಿಗೆ ಕಳಿಸಲಾಗಿ ...ವೆ ಎಂದು ಹೇಳಿದರು.

ವಿಜಾಪುರ ಜಿಲ್ಹೆಯಲ್ಲಿ ಕಳೆದ ಎರಡು ವರ್ಷ ...ದಲ್ಲಿ ಹಳೆ ಹೊಸ ಭಾವಿಗಳು ಸೇರಿ ೨೮೦೦ ...ಭಾವಿಗಳು ಆಗಿರುತ್ತವೆ. ಎಪ್ರಿಲ ತಿಂಗಳಿಂದ ...ಮೂರು ೮೮ ಟನ್ ಕಪ್ಪಿಣವು ಕೊಡಲ್ಪ ...ಟ್ಟಿತು. ಈಗಾಗಲೆ ಇವರಲ್ಲಿ ಬಡುಮಟ್ಟಿಗೆ ...ಜಿಲ್ಹೆಯಲ್ಲಿ ಇದನ್ನು ಹಂಚಲಾಗಿದೆ.

...ಇಂಡಿಯಲ್ಲಿ ಅಸಿಸ್ಟಂಟ ಅಬಕಾರಿ ಇನ ...ಸ್ಪೆಕ್ಟರರಾಗಿದ್ದ ಶ್ರೀ ದಹಲನಿಯವರು ೧೦೦೦ ...ರೂಪಾಯಿಗಳ ಲಂಚ ಸ್ವೀಕರಿಸಿದರೆಂದು ...ಮ್ಯಾಜಿಸ್ಟ್ರೇಟ ಕೋರ್ಟಿನಲ್ಲಿ ಅವ ಶಿಕ್ಷೆಯ ...ವಿರುದ್ಧ ಅವರು ಮಾಡಿಕೊಂಡಿದ್ದ ಅಪೀಲನ್ನು ...ಮುಂಬಯಿ ಹಾಯಕೋರ್ಟಿನವರು ನಿರಾ ...ಕರಿಸಿ ಶಿಕ್ಷೆಯನ್ನು ಸ್ಥಿರಗೊಳಿಸಿದರು.

...ಕರ್ನಾಟಕ ವಿಶ್ವವಿದ್ಯಾಲಯದ ಉಪಕುಲ ...ಪತಿಗಳಾದ ಶ್ರೀ ಜಾಗಿರದಾರ ರಂಗಾ ...ಚಾರ್ಯರು ವಿಜಾಪುರಕ್ಕೆ ಭೆಟ್ಟಿಕೊಟ್ಟಾಗ ...ಇಲ್ಲಿಯ ಸಾರ್ವಜನಿಕ ವಾಚನಾಲಯ ಭವನದ

## ದಕ್ಷಿಣ ಕನ್ನಡ

ಪಶ್ಚಿಮ ಕರಾವಳಿ ಮತ್ತು ನೀಲಗಿರಿಗಳ ಪಂಚಾಯತ ಪರಿಷತ್ತು ದಿನಾಂಕ ೩೧ ರಂದು ಮಂಗಳೂರಲ್ಲಿ ಜನಾಬ್, ಎಚ್. ಎಸ್. ಮುಸೀನ್ ಸಾಹೇಬರ ಅಧ್ಯಕ್ಷತೆಯಲ್ಲಿ ಜರ ಗಿತು. ಮದ್ರಾಸು ಸರಕಾರದ ಸ್ಥಾನಿಕ ಮಂತ್ರಿ ಗಳಾದ ಶ್ರೀ ಕೆ. ಚಂದ್ರಮೌಳಿಯವರು ಈ ಪರಿಷತ್ತನ್ನು ಉದ್ಘಾಟಿಸುತ್ತಾ, ಮದ್ರಾಸು ಸರಕಾರವು ತಂದಿರುವ ಹೊಸ ಮಸೂದೆಯಲ್ಲಿ ಭಾರತದ ಹಳ್ಳಿಗಳಲ್ಲಿರುವ ಐಕ್ಯ ಜೀವನ ವನ್ನು ಕಾಯ್ದುಕೊಳ್ಳಲಾಗಿದೆಯೆಂದರು. ಸ್ವಾಗತಾ ಧ್ಯಕ್ಷರು ತಮ್ಮ ಭಾಷಣದಲ್ಲಿ ಹೊಸ ಮಸೂದೆ ಯಲ್ಲಿರುವ ಕೆಲವೊಂದು ಚರ್ಚಾಸ್ಪದ ಸೂಚ ನೆಗಳನ್ನು ಸಭೆಯ ಮುಂದಿಟ್ಟರು. ಸಂಜೆ ಸೇರಿದ ಬಹಿರಂಗ ಅಧಿವೇಶನದಲ್ಲಿ ಹೊಸ ಮಸೂದೆಗೆ ಕೆಲವು ಸೂಚನೆಗಳನ್ನು ಮಾಡುವ, ಕೆಲವು ಕಲಂಗಳನ್ನು ತೆಗೆದು ಹಾಕುವ ನಿರ್ಧಾರಗಳಾದುವು.

ದಕ್ಷಿಣ ಕನ್ನಡ ಜಿಲ್ಲಾ ವಾಣಿಜ್ಯ ಸಂಘದ ವಾರ್ಷಿಕ ಮಹಾಸಭೆಯು ದಿನಾಂಕ ೨೭ ರಂದು ಸಂಘದ ಕಚೇರಿಯಲ್ಲಿ ಜರಗಿದಾಗ ಒಂದು ವರ್ಷದ ಆಯ-ವ್ಯಯ ಮತ್ತು ಚಟು ವಟಿಕೆಗಳನ್ನು ಒಳಗೊಂಡ ವರದಿಯು ಸ್ವೀಕ ರಿಸಲ್ಪಟ್ಟಿತು. ಬಳಿಕ ಶ್ರೀಗಳಾದ ವಿ. ಎಸ್. ಕುಡ್ವರು ಅಧ್ಯಕ್ಷರಾಗಿಯೂ, ಜನಾಬ್ ಮೊಹಮ್ಮದ್ ಅಬ್ದುಲ್ ಸಾಕೂರ ಸಾಹೇ ಬರು ಉಪಾಧ್ಯಕ್ಷರಾಗಿಯೂ, ಪಿ. ಉಮಾ ನಾಥ ಭಂಡಾರಿಯವರು ಕೋಶಾಧ್ಯಕ್ಷ ರಾಗಿಯೂ, ಶ್ರೀ ದೇವಿದಾಸ ಗಿರಿಧರಲಾಲ ಪಿ. ರಮಾನಾಥ ಶೆಣೈಗಳು ಕಾರ್ಯದರ್ಶಿ ಗಳಾಗಿಯೂ ಆರಿಸಲ್ಪಟ್ಟರು.

ಜಿಲ್ಲಾ ಆಹಾರ ಸಮಿತಿಯ ಸಭೆಯು ಮಂಗ ಳೂರಲ್ಲಿ ಇತ್ತೀಚೆಗೆ ಜರಗಿದಾಗ ಜಿಲ್ಲೆಯ ಆಹಾರ ಪರಿಸ್ಥಿತಿಯನ್ನು ಚರ್ಚಿಸಲಾಯಿತು. ಮುಂದಿನ ಬೆಳೆಯ ಫಲ ಸಿಗುವ ವರೆಗೆ ಈ ಜಿಲ್ಲೆಗೆ ೧೦ ಸಾವಿರ ಟನ್ ಆಹಾರ ಧಾನ್ಯ ಗಳು ಅಗತ್ಯವಿರುವುದರಿಂದ ಸರಕಾರವು ಅವನ್ನು ಕೂಡಲೇ ಪೂರೈಸಬೇಕೆಂಬ ನಿರ್ಧಾರವಾಯಿತಲ್ಲದೆ ಪೂರೈಕೆಯ ವಿಚಾರ ದಲ್ಲಿ ಸಲಹೆ ಕೊಡಲು ಒಂದು ಸಮಿತಿಯ ರಚನೆಯಾಯಿತು.

ಕರ್ನಾಟಕ ಏಕೀಕರಣ ದಿನಾಚರಣೆಯು ದಿನಾಂಕ ೨೫ ರಂದು ಶ್ರೀ ಎಸ್. ನರ್ಸಪ್ಪ ಯ್ಯನವರ ಅಧ್ಯಕ್ಷತೆಯಲ್ಲಿ ಜರಗಿದಾಗ ಕಾಂಗ್ರೆಸ್ ಕಾರ್ಯಕಾರೀ ಸಮಿತಿಯು ಕರ್ನಾ ಟಕ ಏಕೀಕರಣದ ಕುರಿತು ಅನುಕೂಲ ನಿರ್ಣಯ ಮಾಡಬೇಕೆಂದು ಕೇಳಿಕೊಳ್ಳುವ ಗೊತ್ತುವಳಿ ಸ್ವೀಕರಿಸಲ್ಪಟ್ಟು ಅದನ್ನು ತಾರಿನ ಮೂಲಕ ಕಾಂಗ್ರೆಸ್ ಅಧ್ಯಕ್ಷರಿಗೆ ತಿಳಿಸ ಲಾಯಿತು.

ಉಡುಪಿ ಕಾಂಗ್ರೆಸ್ ಕಮಿಟಿಯ ಸಭೆಯು ದಿನಾಂಕ ೨೯ ರಂದು ಸೇರಿದಾಗ ಪಶ್ಚಿಮ ಕರಾ ವಳಿಯಲ್ಲಿ ನಿರ್ಮಾಣವಾಗಲಿರುವ ಪ್ರಬುದ್ಧ ಬಂದರವು ಮಲ್ಪೆಯಲ್ಲಾಗಬೇಕೆಂದು ತಜ್ಞ ಸಮಿತಿಯು ಸೂಚಿಸಿದಂತೆಯೇ ಕೇಂದ್ರ ಸರ ಕಾರವು ಮಂಜೂರು ಮಾಡಿ, ಕೂಡಲೆ ಕಾರ್ಯ ಕೈಗೊಳ್ಳಬೇಕೆಂಬ ತೀರ್ಮಾನವಾಗಿ ಸರ ಕಾರಕ್ಕೆ ತಿಳಿಸಲಾಗಿದೆ.

## ಬೆಳಗಾವಿ

ಬೆಳಗಾವಿ ಸಂಚಾರಕ ಕಣ್ಣಿನ ಆಸ್ಪತ್ರೆಯ ವರು ಆಗಸ್ಟ ತಿಂಗಳಲ್ಲಿ ಕಣ್ಣಿನ ಪರೀಕ್ಷೆಗಾಗಿ ಹುಕ್ಕೇರಿ, ಚಿಕ್ಕೋಡಿ, ಜಮಖಂಡಿ, ಗೋಕಾಕ, ರಾಮದುರ್ಗ, ಸವದತ್ತಿ, ಬೈಲ ಹೊಂಗಲ ಖಾನಾಪುರ ಹಾಗು ಚಂದಗಡ ಗಳಿಗೆ ಭೆಟ್ಟಿ ಕೊಡಲಿದ್ದಾರೆ. ಆಯಾ ಊರು ಗಳಿಗೆ ಹೋಗುವ ತಾರೀಕುಗಳನ್ನು ಗೊತ್ತು ಪಡಿಸಿದ್ದು ಎಲ್ಲರು ಇದರ ಲಾಭ ಪಡೆಯ ಬೇಕೆಂದು ಕೋರಲಾಗಿದೆ.

ಗೋಕಾವಿ ತಾಲೂಕಿನ ಮೇಲಿನ ಹುಣ ಶ್ಯಾಳದಲ್ಲಿ ಶಾಲೆಯ ಹೆಡ್ ಮಾಸ್ತರರಾಗಿದ್ದ ಶ್ರೀ ಬಾ. ಬಾ. ಕುಲಕರ್ಣಿಯವರು ನಿವೃತ್ತ ರಾದ ಬಗ್ಗೆ ಬೀಳ್ಕೊಡುವ ಸಮಾರಂಭವು ಶ್ರೀ ಹೆ. ಅ. ಕುಲಕರ್ಣಿಯವರ ಅಧ್ಯಕ್ಷತೆಯಲ್ಲಿ ಜರುಗಿ ಮಾಸ್ತರರ ಗುಣಗಾನ ಮಾಡ ಲಾಯಿತು.

ಉದ್ಘಾಟನ ಮಾಡಿದರು. ವಿಜಯ ಕಾಲೇಜು ಹಾಗು ವಿವಿಧ ಹಾಯಸ್ಕೂಲುಗಳನ್ನು ಅವರು ಸಂದರ್ಶಿಸಿದರು.

## ಕನ್ನಡ ಸಂಸ್ಥಾನ

ಶಿವಮೊಗ್ಗಿ ಜಿಲ್ಹೆಯ ಮಳೆ ಬೆಳೆಗಳ ವಿಚಾರ ಮಾಡುವದಕ್ಕಾಗಿ ಸೇರಿದ್ದ ಪರಿಷತ್ತಿನಲ್ಲಿ ಈಗಾದ ಮಳೆ ಸಾಕಷ್ಟಿಲ್ಲ, ಜಿಟ್ಟೆ ಉಪದ್ರವ ಕೆಲ ಭಾಗಗಳಲ್ಲಿ ಹೆಚ್ಚಿದೆ, ಅವುಗಳ ಪರಿಹಾ ರೋಪಾಯಗಳನ್ನು ಕೈಕೊಳ್ಳಲಾಗಿದೆ, ಭತ್ತಕ್ಕೆ ಈಗ ಬೆಂಕಿರೋಗವೆಂಬ ಹೊಸರೋಗ ಪ್ರಾಪ್ತ ವಾಗಿದೆಂದು ಮುಂತಾಗಿ ಅಭಿಪ್ರಾಯ ಪಡ ಲಾಯಿತು.

ಶಿವಮೊಗ್ಗೆಯಿಂದ ಆಹಾರ ಧಾನ್ಯವನ್ನು ಹೇರಿಕೊಂಡು ಹೋಗುತ್ತಿದ್ದಾಗ ಲಾರಿಯು ತಿರಾಳಕೊಪ್ಪ ಹಾಗು ಸೊರಬ ನಡುವೆ ದೊಡ್ಡ ಕೆರೆಯಲ್ಲಿ ಮುಗುಚಿ ಬಿದ್ದುದರಿಂದ ಡ್ರಾಯವರನು ಕೂಡಲೆ ಆದರ ಬುಡದಲ್ಲಿ ಬಿದ್ದು ಸಾಲ್ಯ ಘೂಟು ಕೇರಿನಲ್ಲಿ ಉರುಳಿ ಹೋಗಿ ತಕ್ಷಣ ಮರಣ ಹೊಂದಿದನು.

ಆಗಸ್ಟ ೨೧—೨೨ ಕ್ಕೆ ಬೆಂಗಳೂರಿನಲ್ಲಿ ನಡೆ ಯಲಿರುವ ಮೈಸೂರು ಸಂಸ್ಥಾನದ ೬ ನೇ ಪತ್ರಿಕೋದ್ಯೋಗಿಗಳ ಸಮ್ಮೇಲನಕ್ಕೆ ವಿಶ್ವ ಕರ್ನಾಟಕ ಪತ್ರಿಕೆಯ ಸಂಪಾದಕರಾದ ಶ್ರೀ. ಎಸ್. ಎಸ್. ವೆಂಕೋಬರಾಯರು ಅಧ್ಯಕ್ಷ ರಾಗಿ ಆರಿಸಲ್ಪಟ್ಟಿದ್ದಾರೆ.

ಕಳೆದ ಫೆಬ್ರುಅರಿಯಲ್ಲಿ ಹುಬ್ಬಳ್ಳಿ ಪ್ರದರ್ಶ ನಕ್ಕೆ ಬಂದಿದ್ದ ಒಬ್ಬರ ದೇಹ ಇನ್ನೊಬ್ಬರಿಗೆ ಹತ್ತಿಕೊಂಡಿದ್ದ ಬೆಂಗಳೂರಿನ ಗಂಗಮ್ಮ ಗೌರಮ್ಮ ಇವರಲ್ಲಿ ಒಬ್ಬಳಿಗೆ ಅರ್ಧಾಂಗವಾಯು ಆಗಿದ್ದು ಅವಳ ಮೇಲೆ ಶಸ್ತ್ರಕ್ರಿಯೆ ಮಾಡಿ ಇಬ್ಬ ರನ್ನು ಬೇರೆ ಬೇರೆ ಮಾಡುವದಾಗಿ ತಿಳಿಯು ತ್ತದೆ. ಮಹಾರಾಜರೊಂದಿಗೆ ಇವರು ಇಂಗ್ಲಂ ಡಿಗೆ ಹೋದಾಗ ಇವರ ಮೇಲೆ ಶಸ್ತ್ರಕ್ರಿಯೆ ಮಾಡುವದು ಗಂಡಾಂತರದ್ದು ಎಂಬ ಅಭಿ ಪ್ರಾಯ ಪಡಲಾಗಿತ್ತಂತೆ.

ಕಪ್ಪಗಲು ಗ್ರಾಮಪಂಚಾಯತದ ಪರವಾಗಿ ಕಳೆದವಾರ ಶ್ರೀ ಅಬ್ದುಲ್‌ಗನಿ ಸಾಹೇಬರ ಅಧ್ಯಕ್ಷತೆಯಲ್ಲಿ ಸಭೆ ಸೇರಿತ್ತು. ಚೆನ್ನಬಸಪ್ಪ ವಕೀಲ ಬೆಟ್ಟದೂರು ಇವರು ಕರ್ನಾಟಕ ಪ್ರಾಂತೀಕರಣದ ಬಗ್ಗೆ ತಿಳಿಸಿ ಹೇಳಿದರು. ಕರ್ನಾಟಕ ಪ್ರಾಂತವನ್ನು ಕೂಡಲೆ ರಚಿಸ ಬೇಕು ಎಂಬ ಗೊತ್ತುವಳಿಯನ್ನು ಶ್ರೀ ಬಿ. ಎಸ್ ಗೌಡರು ತಂದರು. ಅದಕ್ಕೆ ಶ್ರೀ ಅರಳಪ್ಪ ನವರು ಅನುಮೋದನವಿತ್ತ ಬಳಿಕ ಅದು ಪಾಸಾಗಿ ಸಭೆ ಕೊನೆಗಂಡಿತು.

ಬೆಂಗಳೂರಿಗೆ ಸಮೀಪವಾಗಿರುವ ಯಶ ವಂತಪುರ ಹಳ್ಳಿಕೈ ಹೊಸದಾಗಿ ಸೇತುವೆಯೊಂ ದನ್ನು ಕಟ್ಟಲಾಗಿದ್ದು ಅದರ ಉದ್ಘಾಟನ ಸಮಾ ರಂಭವು ಕಾಮರಿ ಮಂತ್ರಿ ಶ್ರೀ ಭಾಷ್ಯಂರ ಹಸ್ತದಿಂದ ಜರುಗಿತು. ಇದು ಕಬ್ಬಿಣದಿಂದ

## ಹೈದರಾಬಾದ

ಒಕ್ಕಲತನ ಕೂಲಿಕಾರರ ಕೂಲಿ ಹಾಗು ಸಾಮಾನ್ಯ ಉತ್ಪನ್ನದ ವಿಚಾರದಲ್ಲಿ ನಿಜ ಮಾಹಿ ತಿಯನ್ನು ಸಂಗ್ರಹಿಸುವದಕ್ಕಾಗಿ ೨ ಸಾವಿರ ಹಳ್ಳಿಗಳಲ್ಲಿ ವಿಚಾರಣೆ ನಡೆಸಲು ಹಿಂದುಸ್ಥಾನ ಸರಕಾರವು ನಿರ್ಧರಿಸಿದೆ. ೧೯೪೮ ರ ಕನಿಷ್ಠ ವೇತನ ಕಾಯದೆಯನ್ನು ಜಾರಿಗೆ ತರಲು ಸಹಾಯಕವಾಗುವದಲ್ಲದೆ ಒಕ್ಕಲತನ ಕೂಲಿ ಕಾರರ ಪರಿಸ್ಥಿತಿಯನ್ನು ಸುಧಾರಿಸಲು ಅನು ಕೂಲವಾಗುವದೆಂದು ಹೇಳಲಾಗುತ್ತದೆ.

ಮುಂದಿನ ಸಪ್ಟಂಬರ ತಿಂಗಳೊಳಗೆ ಸಧ್ಯದ ಮಂತ್ರಿಮಂಡಲದಲ್ಲಿ ನಾಲ್ವರು ಕಾಂಗ್ರೆಸ್ಸಿ ಗರು ಮತ್ತು ಒಬ್ಬ ಹರಿಜನರನ್ನು ಸೇರಿಸಿಕೊಳ್ಳ ಲಾಗುವದೆಂದು ಸುದ್ದಿ ಹಬ್ಬಿದೆ. ಅಧಿಕಾರಿ ವರ್ಗದವರೇನೋ ಇದನ್ನು ನಿರಾಕರಿಸುತ್ತಿರು ವರು. ಹೈದರಾಬಾದ ಕಾಂಗ್ರೆಸ ಉಪಸಮಿತಿ ಯವರು ಈ ಸಂದರ್ಭದಲ್ಲಿ ಮನವಿಯೊಂ ದನ್ನು ಸಿದ್ಧಪಡಿಸಿದ್ದು ಅದನ್ನು ಮುಖ್ಯ ಮಂತ್ರಿಗಳಿಗೆ ಸಮರ್ಪಿಸಲು ಹೋಗಲಿರು ವರು.

ಹೈದರಾಬಾದ ಸಂಸ್ಥಾನದ ಪ್ರಸಿದ್ಧ ಉದ್ದಿನೆದಾರರಾಗಿರುವ ಕಲಬುರ್ಗಿಯ ಮಹಬೂಬಶಾಹಿ ಗಿರಣಿಯ ಮ್ಯಾನೇಜಿಂಗ ಡಾಯರೆಕ್ಟರ ರಾಯ ಸಾಹೇಬ ಪನ್ನಾಲಾಲ ಲಾಹೋಟಿ ಇವರು ಕಳ್ಳಪೇಟೆಯ ಪ್ರಕರಣ ವೊಂದರಲ್ಲಿ ಸಿಕ್ಕಿದ್ದು ಈಗ ಕಾಣೆಯಾಗಿರುವ ರೆಂದು ತಿಳಿಯುತ್ತದೆ. ಅದೇ ಗಿರಣಿಯ ಮುಖ್ಯ ಮಾರಾಟಗಾರರಾದ ಶ್ರೀ ಜಗನ್ನಾಥ ದ್ವಾರಕಾ ಇವರನ್ನು ಜಾಮೀನ ಮೇಲೆ ಬಿಡ ಲಾಗಿದೆ.

ಲಂಡನದಲ್ಲಿ ಹಿಂದೀ ಹೈಕಮಿಶನರರಿಗೆ ಸಹಾಯಕರಾಗಿದ್ದ ಝುಹೀರ ಅಹ ಮ್ಮದರು ಹೈದರಾಬಾದಕ್ಕೆ ಮರಳಿದ್ದು ಗೃಹ ಖಾತೆಯ ಕಾರ್ಯದರ್ಶಿಯ ಸ್ಥಳವನ್ನು ವಹಿ ಸುವರೆಂದು ತಿಳಿಯುತ್ತದೆ— ಈ ಮೊದಲು ೧೯೪೮ ರಲ್ಲಿ ಅವರು ಅ ಸ್ಥಳದಲ್ಲಿದ್ದರು.

ಹೈದರಾಬಾದದ ಮಿಲಿಟರಿ ಸರಕಾರವು ಬೇಗನೆ ಕೊನೆಗೊಳ್ಳುವದೆಂದು' ಮಿಲಿಟರಿ ಗವರ್ನರರು ಮರಳಿ ಹೋಗುವರೆಂದು ಪ್ರಕಟ ವಾದ ಸುದ್ದಿಗಳನ್ನು ಹೈದರಾಬಾದ ಸರಕಾ ರವು ಒಂದು ಪ್ರಕಟನೆಯಲ್ಲಿ ಅಲ್ಲಗಳೆದು ಬದ ಲಾವಣೆಯ ಯೋಚನೆ ಸಧ್ಯಕ್ಕೆ ಇಲ್ಲವೆಂದೂ ಹೇಳಿದೆ.

ಕಟ್ಟಿದ ಸೇತುವೆಯಾಗಿದ್ದು ಉಕ್ಕು, ಸಿಮೆಂಟ ನಿಂದ ಕಟ್ಟಿದ ಸೇತುವೆಗಿಂತ ಇದಕ್ಕೆ ಬಹಳ ಕಡಮೆ ವೆಚ್ಚ ಬಂದಿದೆಯಂತೆ.

# ಅಪರಾಧಿ

ಪ್ರಭಾತದವರ "ಅಪರಾಧಿ" ಯನ್ನು ಹುಬ್ಬಳ್ಳಿಯ ಸುದರ್ಶನ ರಂಗದಲ್ಲಿ ಪ್ರದರ್ಶಿಸಲಾಗುತ್ತಿದೆ. ಈಗ ೨ ನೆಯ ವಾರ ನಡೆಯುತ್ತಿದೆ. ರಾಮುಸಿಂಹ, ಮಧುಬಾಲೆ ಮುಂತಾದವರು ನಟ ನಟಿಯರು. ಛತ್ರೀಲಾಲರು ದಿಗ್ದರ್ಶಕರು. ಕಥೆ ಸಾಮಾಜಿಕ ಅಭಿನಯದಿಗಳು ಚೆನ್ನಾಗಿವೆ.

ಕಥಾಂತ್ಯದಲ್ಲಿ ನಾಯಕ ಅಮರನು ಹೆಂಡತಿಯ ಮತ್ತು ಮಿತ್ರನೆದುರು ತಾನು ಅಪರಾಧಿ ಎಂದು ಒಪ್ಪಿಕೊಂಡು ಮಿತ್ರನನ್ನು ಅಸಹಾಯತೆಯಿಂದ ಪೋಲೀಸರ ವಶಕ್ಕೆ ಬಿಟ್ಟು ಹೆಂಡತಿ ಮತ್ತು ಮಗುವಿನೊಡನೆ ಮನೆಗೆ ಮರಳಿದನು. ಮನೆಗೆ ಬಂದ ಬಳಿಕ ಆ ರಾತ್ರಿ ಅವನ ಮನದಲ್ಲಿ ತನ್ನ ಪೂರ್ವೇತಿಹಾಸ ವಿಚ್ಛಳವಾಗಿ ಮೂಡಿತು. ಅದನ್ನು ನಾನು ಪರೇಂಗಿತಜ್ಞಾನದ ಮೂಲಕ ತಿಳಿದೆ. ಅವನ ಮನಸ್ಸು ಆಗ ಮಾಡುತ್ತಿದ್ದ ಸ್ವಗತಭಾಷಣ ಹೀಗಿತ್ತು:

"ಅಂಗಸಾಧನೆಯ ಶಿಕ್ಷಕನಾಗಿ ನನ್ನಷ್ಟಕ್ಕೆ ನಾನು ಆನಂದದಿಂದ ಜೀವನವನ್ನು ಸಾಗಿಸುತ್ತಿದ್ದೆ. ಆಗ ಆಕಾಶವಾಣಿಯಲ್ಲಿ ಪ್ರೇಮವನ್ನು ಕುರಿತು ಶೀಲೆ ಬಹಳ ಚೆನ್ನಾಗಿ ಹಾಡಿದಳು. ಅಲ್ಲದೆ ಒಂದು ನೃತ್ಯದಲ್ಲಿಯೂ ಅದೇ ಮೇರೆಗೆ ದಾಂಪತ್ಯದ ರಮ್ಯಚಿತ್ರವನ್ನು ನನ್ನ ಮುಂದಿಟ್ಟಳು. ಅದು ಗಿಳಿಪಾಠ ಮಾತ್ರ ಎಂಬುದು ಆಗ ನನಗೆ ತಿಳಿದಿರಲಿಲ್ಲ. ಸ್ವಯಂಸ್ಫೂರ್ತವೆಂದೇ ತಿಳಿದೆ. ಆ ತಿಳುವಳಿಕೆಯಿಂದ ಅವಳ ಪ್ರೇಮವನ್ನು ಸಂಪಾದಿಸಲು (ಕೆಲವೆಡೆ ಹಾಸ್ಯಾಸ್ಪದವಾಗುವಂತೆ ಕೂಡ) ಪ್ರಯತ್ನಿಸಿದೆ. ಸತಿಯೇ ಸರ್ವಸ್ವ ಎಂದು ಭಾವಿಸಿ ಅಂಥ ಸತಿಯಾಗಲು ಶೀಲೆಯಂಥ ನಿಷ್ಪಾಪ ಬುದ್ಧಿಯ ತರುಣಿ ಯೋಗ್ಯಳೆಂದುಕೊಂಡೆ. ಅವಳಿಗೊಬ್ಬ ಕುರುಡ ಅಪ್ಪನಿದ್ದ. ಆ ಅಪ್ಪನ ಬಗ್ಗೆ ಅವಳಿಗಿದ್ದ ಪ್ರೀತಿ ಆದರ್ಶವಾದುದು. ಆದರಿಂದ ಅವಳಿಗೆ ಪ್ರಾಯಕ್ಕೆ ಸಹಜವಾದ ಪ್ರಿಯಸಮಾಗಮನದ ಆಶೆಯಿದ್ದರೂ ಅದು ಸಾಕಷ್ಟು ಬಲಿತಿರಲಿಲ್ಲ. ಅಲ್ಲದೆ ಹಿಂದೀ ಪದ್ಧತಿಯಂತೆ ಅವಳು ಲಜ್ಜೆ ಸಂಕೋಚಗಳ ಹೊದಿಕೆಯನ್ನೂ ಬಲವಾಗಿ ಹೊದೆದಿದ್ದಳು. ಆದರೂ ಅವಳ ನಿಜಕ್ರೋಧ, ಅಪಹಾಸ್ಯ ಅನಂತರ ಮುಸಿಮುನಿಸು ಈಯೆಲ್ಲವನ್ನೂ ಸಹಿಸಿಕೊಂಡು ಅವಳನ್ನು ಒಲಿಸಿಕೊಳ್ಳಲು ಶಕ್ತನಾದೆ. ಮದುವೆಯೂ ಆಯಿತು. ಮನೆಗೆ ಬಂದೊಡನೆಯೇ ನನ್ನ ನೆರೆಹೊರೆಯ ಗೆಳೆಯ ಗೆಳತಿಯರು ಹೊಸಬಳೆಂದೂ ನನ್ನ ಹೆಂಡತಿಯೆಂದೂ ಅವಳಿಗೆ ಸೌಹಾರ್ದದ ಸ್ವಾಗತವನ್ನು ಎಲ್ಲೆ ಮೀರುವಷ್ಟು ಕೊಟ್ಟರು. ಮುಗ್ಧೆಯಲ್ಲದಿದ್ದರೂ ಭಾರತೀಯ ಸಂಸ್ಕಾರ ವೈಲಕ್ಷಣ್ಯದಿಂದ ಅವಳು ಮುಗ್ಧೆಯಂತೆ ನಟಿಸಿದಳು. ಅದಕ್ಕೆ ನಾನು ಬೇಸರಿಸಲಿಲ್ಲ. ಆ ಪ್ರೇಮವಿಘ್ನ ಪ್ರಕಾರಗಳನ್ನೆಲ್ಲ ಉತ್ಸಾಹ ಭಂಗಕ್ಕೆಡೆಗೊಡದೆ ಸಹಿಸಿಕೊಂಡು ಅವಳನ್ನು ಸತೀಪಟ್ಟದಲ್ಲಿ ಸ್ಥಾಪಿಸಿದೆ.

## ನನ್ನ ಭವಣೆ

ಮುಂದೆ ಪ್ರಾರಂಭವಾಯಿತು ನೋಡಿರಿ ಭವಣೆ. ಮೋಹನನೊಬ್ಬ ನನ್ನ ದೇಶಭಕ್ತ ಗೆಳೆಯ. ತಲೆಮರೆಸಿಕೊಳ್ಳಲು ಬಂದ ಅವನಿಗೆ ಅವಳು ಆಶ್ರಯವಿತ್ತಳು. ಅದಕ್ಕೆ ನಾನೂ ಸಮ್ಮತಿಸಿದೆ. ಆದರೆ ಸತೀಪ್ರೇಮವೇ ಸರ್ವಸ್ವವೆಂದು ಅದರಲ್ಲಿ ಅತಿನಿಷ್ಠೆ ತೋರಿದ ನನ್ನ ಬಗೆಗೂ ಪತಿಪ್ರೇಮವೆಂಬುದು ಪ್ರೇಮದ ಅನೇಕ ಬಗೆಗಳಲ್ಲಿ ಒಂದು ಮಾತ್ರ ಎಂದು ತಿಳಿದ ಅವಳ ಬಗೆಗೂ ಹೊಂದಿಕೆಯಾಗಲಿಲ್ಲ. ಮೋಹನನ ದೇಶಪ್ರೇಮ ಮತ್ತು ಪ್ರೇಮ ಸೌಹಾರ್ದಗಳಿಗೆ ಮನಸೋತು ಅವಳು ಗೃಹಕೃತ್ಯದ ನಿತ್ಯವ್ಯವಹಾರಗಳಲ್ಲಿ ನನ್ನಲ್ಲಿ ಆಗ ಬೇಕಾಗಿದ್ದುದಕ್ಕಿಂತ ಅವನಲ್ಲೇ ಹೆಚ್ಚು ಮಗ್ನಳಾದುದು ನನ್ನದೃಷ್ಟಿಗೆ ಗೋಚರವಾಯಿತು. ನಾನು ಹೇಳಿದ ತಿನಿಸನ್ನು ಕೂಡ ಅಲಕ್ಷ್ಯದಿಂದ ಮಾಡಳು, ಮರೆತೆನೆಂದು ನೆಪ ಹೇಳುತ್ತಿದ್ದಳು. ಅವನು ಹೇಳಿದ-ಅಷ್ಟೇ ಏಕೆ ಹೇಳದೆ ಇದ್ದರೂ ತಾನೇ ತಿಳಿದುಕೊಂಡು ಅವನ ಮನಸ್ಸಿಗೆ ಹಿತವಾದ–ಊಟೋಪಚಾರಗಳನ್ನು ಅತಿಪ್ರೇಮದಿಂದ ನಡೆಸಹತ್ತಿದಳು. ರಾಜಸನೂ ಎಲ್ಲಕ್ಕಿಂತ ದಾಂಪತ್ಯಪ್ರೇಮಕ್ಕೇ ಹೆಚ್ಚಿಗೆ ಸ್ಥಾನ ಕೊಟ್ಟವನೂ ಆದ ನನಗೆ ಈ ನಡತೆ ಸರಿಬೀಳಲಿಲ್ಲ. ಆದರಿಂದ ಹುಳಿಯಾದ ನನ್ನ ಮನ ಆಗಾಗ ಅವಳೆದುರು ಕ್ರೋಧ ಪ್ರದರ್ಶನಕ್ಕೆ ಎಡೆಗೊಟ್ಟಿತು. ಆದರೆ ಅವಳು ಮಾತ್ರ ತನ್ನ ಇಂಗಿತಜ್ಞತೆಯ ಅಭಾವದಿಂದ, ತನ್ನ ನಡತೆಯ ಪರಿಣಾಮದ ಜ್ಞಾನವಿಲ್ಲದೆ, ಗಂಭೀರ ಪ್ರೇಮದ ಪ್ರಾಮಾಣಿಕ ಆದರದಿಂದ ಪ್ರಶ್ನಿಸಿ ತಿಳಿದುಕೊಂಬ ಬಗೆ ತಿಳಿಯದೆ, ತನ್ನದು ನಿಷ್ಪಾಪರೀತಿ ನೀತಿ ಎಂದು ಬಿಂಬಿಸುವ ಅತಿವಿನಯ, ಅತ್ಯಸಹಾಯಕತೆ, ಇತ್ಯಾದಿ ಅಹಿಂಸಾ ಮಾರ್ಗಗಳಿಂದ ಶಸ್ತ್ರಾಸ್ತ್ರಗಳಿಂದ ಉಂಟುಮಾಡಬಹುದಾದ ಹಿಂಸೆಯ ಸಾವಿರ ಪಟ್ಟು ಹಿಂಸೆಯನ್ನು ನನ್ನ ಮನಸ್ಸಿಗೆ ಉಂಟುಮಾಡಿದಳು. ಅವಳು ತಪ್ಪಿಲ್ಲದವಳಂತೆ ನಡೆಯುವ ಮುಗ್ಧರೀತಿ, ಅನಾಸ್ಥೆ, ಅಲಕ್ಷ್ಯ, ಮರೆವು, ಕ್ಷಣಚಿತ್ತತೆ ಇವು ಬೇಕೆಂದೇ ಅವಳು ನನ್ನನ್ನು ಅಣಕಿಸಲು, ಮೂದಲಿಸಲು ಹೂಡಿದ ತಂತ್ರವೆಂಬಂತೆ ತರ್ಕಗತಿಯ ಪ್ರಕಾರ ತೋರತೊಡಗಿತು. ಆದರಿಂದ ನನಗೆ ಹುಚ್ಚೇ ಹಿಡಿದಂತಾಗಿ ನಿತ್ಯವೂ ಅನಾದರವನ್ನುಂಡು ಕೆರಳಿದ ಸರ್ಪನಾಗಿ ಪ್ರೇಮವ್ಯವಹಾರದ ಸೂಕ್ಷ್ಮಜ್ಞತೆಯಿಲ್ಲದ ಅವಳು ಮತ್ತು ಮೋಹನರೊಡನೆ ಕಲಹ ಮಾಡಿ ದಣಿದು ರೇಗಿ ಕೂಗಿದೆ. ಅವಳು ತವರುಮನೆಗೆ ನಡೆದಳು. ಅವನು ಸುಮ್ಮನಾದ.



ಶ್ಯಾಮನೂ ರೇಹನಳೂ ಮಧುಬನದವರು ತಯಾರಿಸಿದ "ಸೂರಜಮುಖಿ" ಎಂಬ ಚಿತ್ರದಲ್ಲಿ ಒಂದು ಶೃಂಗಾರಭಂಗಿಯಲ್ಲಿರುವುದು.

## ನನಗಿಂತ ಮಗುವೇ ಹೆಚ್ಚು

ಗರ್ಭಿಣಿಯಾಗಿದ್ದುದರಿಂದ ಅವಳಿಗೆ ಅಲ್ಲಿ ಪ್ರಸವವಾಯಿತು. ಒಮ್ಮೆ ಅಲ್ಲಿ ಹೋಗಿ ಗುಪ್ತವಾಗಿ (ಮನೆಯಲ್ಲಿ ಮೋಹನ ಮತ್ತು ಅವಳ ಸ್ವಚ್ಛಂದ ವರ್ತನೆಯನ್ನು ಕದ್ದು ಕಂಡಂತೆಯೇ) ಪರೀಕ್ಷಿಸಿದೆ. ಅವಳಿಗೆ ನನ್ನ ಚಿಂತೆಯೇ ಇಲ್ಲ. ಅವಳಾಯಿತು, ಅವಳ ಅಪ್ಪನಾಯಿತು, ಅವಳ ಮುದ್ದು ಮಗುವಾಯಿತು. ಅವಳ ಆ ವಿಧದ ಆಟ, ಪಾಠ, ವಿನೋದ, ಉಲ್ಲಾಸಗಳನ್ನು ಕಂಡು ನನಗೆ ಜುಗುಪ್ಸೆ ಬಂದಿತು; ಮಗುವಿನ ಮೇಲೆಯೂ ತಿರಸ್ಕಾರ ಬಂದಿತು; ದ್ವೇಷ ಬೆಳೆಯಿತು. ಬಸುರಿಯಾಗಿದ್ದಾಗ ಒಮ್ಮೆ ಕ್ರುದ್ಧನಾಗಿ ಹೊಡೆಯಲು ಕೈಯೆತ್ತಿದಾಗ ಕ್ರೂರಿ, ರಾಕ್ಷಸ, ಪಿಶಾಚ ಎಂದು ನನ್ನನ್ನು ಶಪಿಸಿದ್ದಳಲ್ಲದೆ, ನನ್ನ ಮನದ ಬೇಗುದಿಯ ಕಾರಣವನ್ನು ಸಹಾನುಭೂತಿಯಿಂದ ಕೇಳಿ ಸಂತೈಸಲು ಪ್ರಯತ್ನಿಸಲಿಲ್ಲ ಎಂಬ ಸಂಗತಿ ನೆನಪಾಗಿ ಮಗುವನ್ನು ಅಪಹರಿಸಿದೆ. ಅವಳು ಪೋಲೀಸಿಗೆ ದೂರು ಕೊಟ್ಟಳು. ಪೋಲೀಸರೆದುರು ನಾನು ಮಗುವಿನ ಬಗ್ಗೆ ನನಗೆ ಏನೂ ಗೊತ್ತಿಲ್ಲ, ಅದು ನನ್ನದೂ ಅಲ್ಲ ಎಂದೆ. ಹಾಗಾದರೆ ಯಾರದು ಎನ್ನಲು ನೀನೇ ಉಚ್ಚರಿಸು ಅವನ ಹೆಸರನ್ನು ಎಂದೆ. ಅದನ್ನು ಕಂಡು, ಇಷ್ಟು ಸಂಕಟಕ್ಕೆ ಸಿಲುಕಿದ್ದ ನನ್ನ ಬಗ್ಗೆ ತಿಲಮಾತ್ರವೂ ಕನಿಕರವಿಲ್ಲದೆ ದೇಶಪ್ರೇಮಿಯಾದ ಮೋಹನನೇ ನನಗಿಂತ ಹೆಚ್ಚಿನವನೆಂದು ಯಾವ ದೇಶಸೇವೆಯನ್ನೂ ಮಾಡದ ಯಃಕಶ್ಚಿತ್ ವ್ಯಕ್ತಿಯಾದ ಶೀಲೆ (ಶೀಲೆಯೆನ್ನಬೇಕೋ ದುಃಶೀಲೆಯೆನ್ನಬೇಕೋ ನನಗೆ ತಿಳಿಯದು!) ಎಲ್ಲೂ ಇಲ್ಲದ ದೇಶನಿಷ್ಠೆಯಿಂದ ಅವನ ಹೆಸರನ್ನು ಪೋಲೀಸರಿಗೆ ತಿಳಿಯಗೊಡಬಾರದೆಂದು ಕಡೆಗೂ ಅವಳು ಹೇಳಲಿಲ್ಲ. ಆಗ ನಾನೇ ಹೇಳಿದೆ. ಆ ಮೂಲಕ ಮೋಹನ

(೧೩ ನೇ ಪುಟಕ್ಕೆ)

**ಇಂಡೊನೇಶಿಯದಲ್ಲಿ** ಡಚ್ಚರಿಗೂ ಪ್ರಜಾರಾಜ್ಯದವರಿಗೂ ನಡುವೆ ಯುದ್ಧ ವಿರಾಮದ ಒಪ್ಪಂದವಾಯಿತು. ಮುಂದಿನ ತಿಂಗಳು ಹೇಗಿನಲ್ಲಿ ದುಂಡುಮೇಜಿನ ಪರಿಷತ್ತು ನಡೆ[illegible]. ಕೆಲ ಕೂಟಯೋಧರು ಮಾತ್ರ ಇನ್ನೂ ಡಚ್ಚರ ವಿರುದ್ಧವಾಗಿ ತಮ್ಮ ಹೋರಾಟವನ್ನು ನಡೆಸುತ್ತಲೇ ಇದ್ದಾರೆ. ಯುದ್ಧ ವಿರಾಮದ ಒಪ್ಪಂದ ಬಹುಬೇಗ ಅಮಲಿನಲ್ಲಿ ಬರಲಿದೆ.

[illegible] ದಲ್ಲಿರುವ ಮಾಲಿ ಎಂಬಲ್ಲಿ ತಮ್ಮ ಸೈನ್ಯ[illegible] ದಂಗೆಗಾರರ ಮೇಲೆ ಬ್ರಿಟಿಶ ಸರಕಾರೀ ಸೈನಿಕರು ಪ್ರತಿದಾಳಿ ಮಾಡಿ ಬಹಳ ಕಷ್ಟನಷ್ಟಗಳಿಗೀಡು ಮಾಡಿದರು ಎಂದು ಬ್ರಿಟಿಶ ಸರಕಾರದ ಹೇಳಿಕೆಯಿದೆ. ಪ್ರತಿದಾಳಿಯಲ್ಲಿ ಮಾಲಿ ಪಟ್ಟಣ ಅಗ್ನಿಗಾಹುತಿಯಾಯಿತೆಂದು [illegible].

**ಇಂಡೋಚೀನದಲ್ಲಿ** ಸ್ವಾತಂತ್ರ್ಯ ಸಮರ ನಡೆಸುತ್ತಿರುವ ಯೋಧರಿಗೆ ಫ್ರೆಂಚ್ ಸೈನಿಕರು ಚಿತ್ರಹಿಂಸೆ ಕೊಟ್ಟರೆಂದು ಪ್ಯಾರಿಸ್ಸಿನ ಕನ್‌ಸರ್ವೇಟಿವ್ ಪತ್ರಿಕೆಯಾದ "ಲಾಮಾಂಡ್" ಪ್ರಕಟಪಡಿಸಿದೆ.

ಅಣುಶಕ್ತಿಯ ಮೇಲೆ ಲೇಕ್‌ಸಕ್ಸೆಸ್ಸಿನಲ್ಲಿ ಆರು ಪ್ರಭುತ್ವಗಳು ಸೇರಿ ಚರ್ಚೆ ನಡೆಸಲಿವೆ; ಆದರೆ ಅವು ಯಾವ ವಿಶಿಷ್ಟ ಸೂಚನೆಗಳನ್ನೂ ತರಲಾರವು, ಎಂದು ತಿಳಿದು ಬಂದಿದೆ.

**ಚೆಂಗ್‌ಶಾ** ಪಟ್ಟಣವನ್ನು ಕಮ್ಯುನಿಸ್ಟರಿಗೆ ಬಿಟ್ಟುಗೊಟ್ಟು ಸೈನ್ಯವನ್ನು ಹಿಂತರಿಸಿಕೊಂಡು ಕೂಟಯುದ್ಧವನ್ನು ಅವಲಂಬಿಸಬೇಕೆಂದು ರಾಷ್ಟ್ರೀಯ ಸೇನಾಪತಿ ಪೈಚುಂಗ್ಸಿ ಅಪ್ಪಣೆ ಕೊಟ್ಟಿದ್ದಾರೆ.

ಅಮೇರಿಕದ ರಾಜತಂತ್ರಜ್ಞರ ಒಂದು ಪಂಗಡದಲ್ಲಿಯ ರಾಯಭಾರಿಯೊಬ್ಬನನ್ನು ಹೊರತುಮಿಕ್ಕೆಲ್ಲರನ್ನು "ಶಾಪ್ ಗ್ಯಾರಂಟಿ" ಗೆ ಸಹಿ ಮಾಡದೆ ಸ್ವದೇಶಕ್ಕೆ ಮರಳಗೊಡುವುದಿಲ್ಲ ಎಂದು ಕಮ್ಯುನಿಸ್ಟರು ತಡೆಹಿಡಿದರು.

ನೂರಾರು ಚೀನೀಯರು ಶಾಂಘಾಯಿಯಲ್ಲಿರುವ ಅಮೇರಿಕನ್ ರಾಯಭಾರಿಯ ಕಚೇರಿಯನ್ನು ನುಗ್ಗಿ ಸಂಬಳದ ಬೇಡಿಕೆಯನ್ನು ಪುನಃ ಒತ್ತಾಯಪಡಿಸಿದರು. ಆ ಸಂದರ್ಭದಲ್ಲಿ ಪೋಲೀಸರನ್ನು ಕರೆದರೆ ಅವರು ಮಾತಾಡಲಿಲ್ಲ; ಕಮ್ಯುನಿಸ್ಟರ ವಿದೇಶ ಕಚೇರಿಗೆ ತಿಳಿಸಿದರೆ ಅಲ್ಲಿಯವರೂ ಸಹಾಯಪ್ರದರಾಗಲಿಲ್ಲ ಎಂದು ವಾಶಿಂಗ್‌ಟನ್ನಿಗೆ ಸುದ್ದಿ ಬಂದಿದೆ.

[illegible]

**ಸಿಂಹಳದಲ್ಲಿ** ಹೊಸ ತಲೆ [illegible] ಗಳನ್ನು ಛಾಪಿಸಲಾಯಿತು. [illegible] ಆಗ ಪ್ರತಿಯೊಬ್ಬ [illegible] ರಾಷ್ಟ್ರೀಯ "[illegible]" [illegible] ಬೇಕಾಗುವದು.

**೯೫,೦೦೦ ಬ್ರಿಟಿಶ್ ರೇಲ್ವೆ** ಕೆಲಸಗಾರರು ಕೂಲಿಯ ಬಗ್ಗೆ ಉಂಟಾದ ಕಲಹದ [illegible] ಯಿಂದ [illegible] ಸರಕಾರಕ್ಕೆ ೨೧ ದಿನಗಳ ಮುಂಚೆ [illegible] ನೋಟೀಸನ್ನು ಕೊಟ್ಟಿದ್ದಾರೆ.

**ಸಂ. ರಾ. ಸಂಘದ** [illegible] ವಿಶೇಷವಾಗಿ ಯುದ್ಧ ಕ್ಷೇತ್ರಗಳಿಗೆ [illegible] ನಿಧಿಗಳನ್ನು ಕಳಿಸುವಾಗ ಅವರಿಗೆ [illegible] ಸಂರಕ್ಷಣೆ ಕೊಡಲು ಅಂಗರಕ್ಷಕ[illegible] ದ್ದೆಂಬ ಪ್ರಧಾನ ಕಾರ್ಯದರ್ಶಿ [illegible] ಲೈ ಅವರ ಯೋಜನೆ ಅಂಗೀಕೃತ[illegible].

**ಅಫಗಾಣಿಸ್ತಾನದ** ಪ್ರದೇಶದಲ್ಲಿ [illegible] ಸ್ತಾನದವರು ಜೂನ್ ೧೨ ರಲ್ಲಿ ಬಾಂಬು [illegible] ದ್ದರಿಂದ ಉಂಟಾದ ಹಾನಿಯನ್ನು [illegible] ಕೊಡುವುದಾಗಿ ಪಾಕಿಸ್ತಾನ ಸರಕಾರ ಒಪ್ಪಿ[illegible] ಯಿತ್ತಿದೆ.

ಐರ್ಲೆಂಡಿನ ಮಜೂರ ಸಂಘಗಳ [illegible] ಮತ್ತು ಕಮ್ಯುನಿಸ್ಟ ಪ್ರಭಾವಕ್ಕೆ ಒಳಗಾಗಿರುವ ಜಾಗತಿಕ ಮಜೂರ ಸಂಘಗಳ [illegible] ಮಂಡಲದಿಂದ ತನ್ನ ಸದಸ್ಯತ್ವವನ್ನು ಹಿಂತೆಗೆದುಕೊಳ್ಳಲು ನಿರ್ಧರಿಸಿತು.

**ಪಶ್ಚಿಮ ಜರ್ಮನಿಯ** [illegible] ಪಾರ್ಲಿಮೆಂಟಿಗೆ ಅಲ್ಲಿಯ ೨೪೨ ಚುನಾವಣೆ[illegible] ಕ್ಷೇತ್ರಗಳಿಂದ ೪೦೦ ಸದಸ್ಯರನ್ನು ಅಗಸ್ಟ್ ೧೪ ರಲ್ಲಿ ಚುನಾಯಿಸಲಾಗುವದು. ಕಳೆದ ೧೬ ವರ್ಷಗಳ ಬಳಿಕ ಜರ್ಮನರು ಚುನಾವಣೆಯ ಸವಲತ್ತನ್ನು ಇದೀಗ ಪಡೆದಿದ್ದಾರೆ.

**ಬ್ರಿಟನ್ನಿನ** ನೌಕಾಖಾತೆಯು ತನ್ನ ದೊಡ್ಡ ದೊಡ್ಡ ಯುದ್ಧನೌಕೆಗಳ ಸಂಖ್ಯೆಯನ್ನು ಕಡಿಮೆ ಮಾಡಿ ಅವಕ್ಕೆ ಬದಲಾಗಿ ಚಿಕ್ಕ ಚಿಕ್ಕವನ್ನು ಸಂಗ್ರಹಿಸುವ ವಿಚಾರ ಮಾಡಿದ್ದನ್ನು ಇದೀಗ ಹೊರಗೆಡಹಿದೆ.

**ಪಶ್ಚಿಮ ಯುರೋಪಿನ** [illegible] ಮತ್ತು ಇಂಗ್ಲೆಂಡ [illegible] ನಾಳಿನ ಸೆಪ್ಟಂಬರಿನಲ್ಲಿ "ಕುಮಾರಿ ಯುರೋಪ್" ಎಂಬ ಪದವಿಗೆ ಅರ್ಹಳಾಗುವ ಹೆಂಗಸನ್ನು ಆರಿಸಲು ಸೌಂದರ್ಯಸ್ಪರ್ಧೆಯೊಂದನ್ನು ಏರ್ಪಡಿಸಲು ಸಿದ್ಧತೆ ನಡೆಸಿದ್ದಾರೆ.

ಅರ್ಥಹೀನ ಸ್ತ್ರೀಸ್ವಾತಂತ್ರ್ಯಕ್ಕೆ ಪ್ರಾಧಾನ್ಯ ಕೊಡುವ ಯುರೋಪಿಯನ್ ಪದ್ಧತಿಯ [illegible] ರೇಕಕ್ಕೆ ನಿದರ್ಶನವಾಗಿ ಇಂಗ್ಲೆಂಡಿನ ೧೮ ವರ್ಷ ವಯಸ್ಸಿನ ಬ್ರಿಜೆಟ್ ಎಂಬ ತರುಣಿ ಸ್ವಿಜರ್‌ಲೆಂಡಿನಲ್ಲಿ ಬೆಳಗಿನಿಂದ ಅಪರಾಹ್ನ ೨ ಗಂಟೆಯ ವರೆಗೆ ಕುಣಿದು ಕುಣಿದೇ ಸತ್ತಳೆಂದು ತಿಳಿಯುತ್ತದೆ.





# ಆಗಸ್ಟ್ ೮ ರಿಂದ ೧೪ ರ ವರೆಗೆ

[ಜ್ಯೋತಿಷಿ:— ಶ್ರೀ ಕೃಷ್ಣಶಾಸ್ತ್ರಿ ಭಿಡೆ, ಬೆಳಗಾಂವಿ]

**ಮೇಷ**

ಆರೋಗ್ಯ ನಿಮ್ಮದೂ ಹೆಂಡತಿಯದೂ ಚೆನ್ನಾಗಿರುವದು. ನಿಮ್ಮ ಮಕ್ಕಳ ವೃತ್ತಿಯಿಂದ ನಿಮ್ಮ ಮನಸ್ಸು ತುಂಬ ಚಿಂತಾಕ್ರಾಂತವಾಗಬಹುದು. ಸ್ಥಾವರದಲ್ಲಿ ನಿಮಗೆ ಅನುಕೂಲವಾದ ಸಂಗತಿಗಳು ಜರಗಬಹುದಾದರೂ ಅದಕ್ಕೆ ಅಡ್ಡಗಾಲು ಹಾಕಲು ಕೆಲವರು ಪ್ರಯತ್ನಿಸಬಹುದು. ಉದ್ಯೋಗದಲ್ಲಿ ಲಾಭವೂ ಪ್ರತಿಷ್ಠೆಯೂ ದೊರಕುವವು. ಪೂಜ್ಯ ಜನರ ಸಹವಾಸ ಯೋಗವಿದೆ. ವಾದ ಸ್ಪರ್ಧೆಗಳಲ್ಲಿ ನಿಮಗೆ ವಿಜಯ ದೊರಕುವದು. ಭೆಟ್ಟಿಗಿಂತ ಪತ್ರವ್ಯವಹಾರ ಲೇಸು. ಪ್ರವಾಸವೂ ಸುಖಾವಹವಾಗುವದು. ಅಶ್ವಿನಿಯ ಕೊನೆಯ ೩ ಮತ್ತು ಭರಣಿಯ ೧ ನೆ ಚರಣಗಳಿಗೆ ಸಾಹಸ ಬಲದಿಂದಲೇ ಕಾರ್ಯಸಿದ್ಧಿಯಾಗಬೇಕು. ತಾ. ೮, ೯, ೧೦, ೧೧ ಅನುಕೂಲ.

**ವೃಷಭ**

ನಿಮ್ಮಿಬ್ಬರ ಪ್ರಕೃತಿಯೂ ಸರಿಯಾಗಿದ್ದರೂ ಮಕ್ಕಳಿಗೆ ಅಲ್ಪಸ್ವಲ್ಪ ಕ್ಲೇಶವಾಗುವ ಸಂಭವವುಂಟು. ಮೇಲಾಗಿ ಯಾವುದೋ ಒಂದು ಗುಪ್ತ ಕಾರಣದಿಂದ ನಿಮ್ಮ ಪ್ರಾಪಂಚಿಕ ಸುಖಕ್ಕೆ ರಾಹುಗ್ರಾಸವೊದಗುವಂತಿದೆ. ವಾಹನಸುಖ ಅತ್ಯುತ್ತಮವಾಗಿದೆ. ಉದ್ಯೋಗದಲ್ಲಿ ಲಾಭವೂ ಪ್ರತಿಷ್ಠೆಯೂ ನೀವು ಬಗೆದಂತೆ ದೊರೆಯುವದು. ವ್ಯಾಜ್ಯ ಮೊದಲಾದ ಸ್ಪರ್ಧಾತ್ಮಕ ವ್ಯವಹಾರದಲ್ಲಿ ನಿಮಗೇ ಅನುಕೂಲ. ಯಾತ್ರೆಗಾಗಿ ಪ್ರವಾಸ ಕೈಕೊಳ್ಳಬಹುದು. ಭೆಟ್ಟಿ ಮತ್ತು ಪತ್ರವ್ಯವಹಾರ ಎರಡೂ ಅಪೇಕ್ಷಿಸಿದಂತೆಯೆ ಪರಿಣಮಿಸುವವು. ರೋಹಿಣಿಯ ಕೊನೆಯ ೩ ಮತ್ತು ಮೃಗಶಿರದ ೧ ನೆ ಚರಣಗಳವರು ದೈವವನ್ನೆ ನಂಬಿ ಕುಳಿತುಕೊಳ್ಳುವಂತಿಲ್ಲ. ತಾ. ೮, ೯, ೧೩, ೧೪ ಅನುಕೂಲ.

**ಮಿಥುನ**

ನಿಮ್ಮ ಪತ್ನಿಯ ಆರೋಗ್ಯದ ವಿಷಯಕ್ಕೆ ತುಸು ಎಚ್ಚರ ಬೇಕೆಂದು ಸೂಚಿಸಬೇಕಾಗಿದೆ. ಉದ್ಯೋಗದಲ್ಲಿ ನೀವು ನಿಮ್ಮ ಗೌರವಕ್ಕೆ ಆತಂಕ ಬರಬಹುದಾದ ಕಾರ್ಯಗಳಿಗೆ ಕೈಹಾಕಬೇಡಿರಿ; ಲಾಭ ಚನ್ನಾಗಿರುವದು. ವ್ಯಾಜ್ಯ ಸ್ಪರ್ಧೆಗಳಲ್ಲಿ ಒಡಂಬಡಿಕೆಯಾಗುವ ಸಂಭವವುಂಟು. ಭೆಟ್ಟಿಯಾದರೆ ಕೆಲಸ ನೆರವೇರುವಂತೆ ಕಾಣುವದಿಲ್ಲ. ಪತ್ರವ್ಯವಹಾರವೇ ಲೇಸು. ಪ್ರವಾಸ ಸುಖಕರ. ಆರ್ದ್ರೆಯ ಕೊನೆಯ ೩ ಮತ್ತು ಪುನರ್ವಸುವಿನ ೧ ನೆ ಚರಣಗಳಿಗೆ ತುಸು ದೈವಾನುಗ್ರಹ ಕಡಿಮೆ. ತಾ. ೧೦, ೧೧, ೧೪ ಅನುಕೂಲ.

**ಕರ್ಕ**

ಮಕ್ಕಳ ಆರೋಗ್ಯ ಅಷ್ಟು ಸರಿಯಾಗಿ ಉಳಿಯುವಂತಿಲ್ಲ. ನಿಮ್ಮ ಪ್ರಕೃತಿ ಚನ್ನಾಗಿದ್ದರೂ ಹೆಂಡತಿ ಮಕ್ಕಳೊಡನೆ ಅಷ್ಟು ಸಲುವಳಿ ಸರಿಯಾಗಿರದುದರಿಂದ ಪ್ರಾಪಂಚಿಕ ಸುಖದಲ್ಲಿ ಲೋಪ ಕಾಣಬಹುದು. ಉದ್ಯೋಗದಲ್ಲಿ ಲಾಭ ಚನ್ನಾಗಿ ಬಂದರೂ ನಿಮ್ಮ ಪ್ರತಿಷ್ಠೆಗೆ ಒಮ್ಮಿಂದೊಮ್ಮೆ ಹೊಡೆತ ಬೀಳುವ ಸಂಭವ ಗಳೊದಗಬಹುದಾದ ಕಾರಣ ಸತ್ಯಮಾರ್ಗವನ್ನೇ ಗಟ್ಟಿಯಾಗಿ ಹಿಡಿದುಕೊಳ್ಳಿರೆಂದು ಬೋಧಿಸುತ್ತೇನೆ. ವಾದ ಸ್ಪರ್ಧೆಗಳಲ್ಲಿ ಮಹತ್ವದ ಸಂಗತಿಗಳು ಜರಗುವದಿಲ್ಲ. ಅನಿರೀಕ್ಷಿತ ಲಾಭಯೋಗವಿದೆ. ನಿಮ್ಮ ತಪ್ಪುಗಳು ಬೇರೆಯವರಿಗೆ ಕೂಡ ಉಪದ್ರವ ಕೊಡಬಹುದು. ಪ್ರವಾಸ ನಿರಾಶದವಾಗಿ ಜರಗೀತು. ಪತ್ರವ್ಯವಹಾರ ಮಧ್ಯಮ. ಭೆಟ್ಟಿಗೆ ಹಲವು ವಿಘ್ನಗಳು. ಪುಷ್ಯದ ಕೊನೆಯ ೩ ಮತ್ತು ಆಶ್ಲೇಷೆಯ ೧ ನೆ ಚರಣಗಳಿಗೆ ತೊಂದರೆ ಹೆಚ್ಚು. ತಾ. ೮, ೯, ೧೩, ೧೪ ಅನುಕೂಲ.

**ಸಿಂಹ**

ಹೆಂಡತಿ ಮಕ್ಕಳು ಸ್ವಸ್ಥರಾಗಿದ್ದರೂ ನಿಮ್ಮ ಆರೋಗ್ಯಕ್ಕೆ ಮಾತ್ರ ದಿನವೂ ವಿಷಾದರೊಂದು ಕಾಡದು ಇದ್ದದ್ದೆ. ಉಳಿದ ವಿಷಯಗಳಲ್ಲಿಯೂ ನಿಮಗೆ ನಿಷ್ಫಲವೇ. ಉದ್ಯೋಗದಲ್ಲಿ ಪ್ರತಿಷ್ಠೆಯೂ ಲಾಭವೂ ಯಥೇಷ್ಟ ಇದ್ದರೂ ಬೆಚ್ಚವೂ ಕಂಡಾಬಟ್ಟೆಯಾಗುವದರಿಂದ ನಿಮ್ಮ ಆರ್ಥಿಕ ಸ್ಥಿತಿ ಇದ್ದಲ್ಲೇ ಇರುವದು. ಮಿತ್ರ ಸಹಾಯವಿದೆ. ವ್ಯಾಜ್ಯ ಮೊದಲಾದವುಗಳಲ್ಲಿ ಶತ್ರುವಿನ ಕೈ ಮೇಲಾಗುವ ಸಂಭವವಿರುವದರಿಂದ ನೀವು ಸಮಯ ಕಾಯುವದೊಳಿತು. ದುಃಸ್ವಪ್ನಗಳಿಂದ ಮನಸ್ಸು ಚೆದರಬಹುದು. ಪ್ರವಾಸಾದಿ ಕಾರ್ಯಗಳು ಸಫಲವಾಗುವವು. ಮಘೆಯ ಕೊನೆಯ ೩ ಮತ್ತು ಪೂರ್ವದ ೧ನೆ ಚರಣಗಳಿಗೆ ಅನಿಷ್ಟ ಫಲವೇ ಹೆಚ್ಚು. ತಾ. ೧೦, ೧೧, ೧೪ ಅನುಕೂಲ.

**ಕನ್ಯಾ**

ಹೆಂಡತಿಯ ಪ್ರಕೃತಿ ಸರಿಯಾಗಿದ್ದರೂ ನಿಮ್ಮದು ಮತ್ತು ಮಕ್ಕಳದು ಅಷ್ಟು ಸ್ವಸ್ಥವಾಗಿರಲಾರದು. ಉದ್ಯೋಗದಲ್ಲಿ ಪ್ರತಿಷ್ಠೆಗೆ ಬರಬಹುದಾದ ಗಂಡಾಂತರಗಳ ಬಗ್ಗೆ ನೀವು ಮೈಮರೆತಿರಕೂಡದು. ಲಾಭ ಯಥೇಷ್ಟ ದೊರಕುವದು. ವ್ಯಾಜ್ಯ ವಾದವಿವಾದಗಳಲ್ಲಿ ಮೊದಲು ಶತ್ರು ಸೋತಂತೆ ಕಂಡರೂ ನೀವು ಉಬ್ಬಬೇಡಿರಿ. ಇಲ್ಲದಿದ್ದರೆ ಮುಂದೆ ನೀವೇ ಹಿಂದೇಟು ತಿನ್ನಬೇಕಾದೀತು. ಪ್ರವಾಸಾದಿ ಕಾರ್ಯಗಳು ಅಷ್ಟು ಹಿತವಾಗಲಿಕ್ಕಿಲ್ಲ. ಹಸ್ತದ ಕೊನೆಯ ೩ ಮತ್ತು ಚಿತ್ರೆಯ ೧ ನೆ ಚರಣಗಳಿಗೆ ತೊಂದರೆ ಹೆಚ್ಚು. ತಾ. ೮, ೯, ೧೩ ಅನುಕೂಲ.

**ತುಲಾ**

ನಿಮ್ಮ ಆರೋಗ್ಯ ಸರಿಯಾಗಿರುವದು. ಆದರೆ ಹೆಂಡತಿ ಮಕ್ಕಳ ವಿಷಯದಲ್ಲಿ ಈ ಮಾತು ಹೇಳಲು ಸಾಧ್ಯವಿಲ್ಲ. ಇತರ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಎಷ್ಟೋ ಮೇಲು. ಉದ್ಯೋಗದಲ್ಲಿಯೂ ಪ್ರತಿಷ್ಠೆಯೂ ಲಾಭವೂ ನೀವು ಅಪೇಕ್ಷಿಸಿದಷ್ಟು ಬರುವವು ವೆಚ್ಚವೂ ಬಹಳವಾಗಬಹುದು. ಆದರೆ ಅದೆಲ್ಲ ಸತ್ಕಾರ್ಯದಲ್ಲಾಗುವ ವೆಚ್ಚವಾದ ಕಾರಣ ದುಃಖಿಸುವ ಪ್ರಮೇಯವಿಲ್ಲ. ನಿಮ್ಮ ಶತ್ರುಗಳ ಮೂಳೆ ಮುರಿಯುವಂತೆ ನಿಮಗೆ ಈ ವಾರ ಜಯ ಸಿಗಲಿದೆ. ಸ್ಥಾವರದಲ್ಲಿ ಕೆಲ ಅನುಕೂಲ ಮಾತುಗಳು ಘಟಿಸಬಹುದು. ಪ್ರವಾಸಾದಿ ಕಾರ್ಯಗಳು ಬಯಸಿದಂತೆ ಕೈಗೂಡುವವು. ಸ್ವಾತಿಯ ಕೊನೆಯ ೩ ಮತ್ತು ವಿಶಾಖೆಯ ೧ ನೆ ಚರಣಗಳಿಗೆ ಸ್ವಲ್ಪ ತೊಂದರೆಯಾಗಬಹುದು. ತಾ. ೧೦, ೧೧, ೧೪ ಅನುಕೂಲ.

**ವೃಶ್ಚಿಕ**

ಈ ವಾರ ನಿಮಗೆ ಅನೇಕ ವಿಧದಿಂದ ಹಿತವಾಗಿ ಪರಿಣಮಿಸಲಿದೆ. ನಿಮ್ಮ ಸ್ವಂತ ಆರೋಗ್ಯವನ್ನು ಒಂದಿಷ್ಟು ಎಚ್ಚರಿಕೆಯಿಂದ ಲಕ್ಷಿಸುತ್ತ ಬಂದರೆ ಬೇರಾವ ವ್ಯಥೆಯೂ ನಿಮಗೊದಗಲಾರದು. ಸ್ಥಿರಾಸ್ತಿಯನ್ನು ಗಳಿಸುವಿರಿ, ಅಥವಾ ಆ ಬಗ್ಗೆ ಒಂದು ಅನುಕೂಲ ಪ್ರಸ್ತಾವ ಪ್ರಾರಂಭವಾಗಲಿದೆ. ಉದ್ಯೋಗದಲ್ಲಿ ಪ್ರತಿಷ್ಠೆಯೂ ಲಾಭವೂ ನಿಮ್ಮಿಚ್ಛೆಯಂತೆ ಕೈಗೂಡುವವು. ಪ್ರವಾಸ ಪುಣ್ಯಕಾರ್ಯಗಳಿಗಾಗಿ. ಪೂಜ್ಯ ವ್ಯಕ್ತಿಗಳನ್ನು ಸಂಧಿಸುವಿರಿ. ವ್ಯಾಜ್ಯ ಮೊದಲಾದ ವ್ಯವಹಾರಗಳಲ್ಲಿ ಎರಡೂ ಪಕ್ಷಗಳು ಇದ್ದಂತೆಯೆ ಉಳಿಯುವವು. ಭೆಟ್ಟಿ ಮತ್ತು ಪತ್ರವ್ಯವಹಾರ ಎರಡೂ ಉತ್ತಮ. ಅನುರಾಧೆಯ ಕೊನೆಯ ೩ ಮತ್ತು ಜ್ಯೇಷ್ಠೆಯ ೧ ನೆ ಚರಣಗಳಿಗೆ ಯಶಸ್ಸು ಮಾತ್ರ ಅಷ್ಟು ಸರಳವಿಲ್ಲ. ತಾ. ೮, ೯, ೧೩, ೧೪ ಅನುಕೂಲ.

**ಧನು**

ಮನಸು ಹೊಂದಿಕೆಯಾಗದ ದಾಂಪತ್ಯದಲ್ಲಿ ಸುಖ ಕಡಿಮೆಯೆಂಬ ಮಾತು ನಿಮಗೆ ಈ ವಾರ ನಿದರ್ಶನಕ್ಕೆ ಬರುವದು. ನಿಮ್ಮಿಬ್ಬರ ಆರೋಗ್ಯ ಚನ್ನಾಗಿಯೆ ಇದ್ದರೂ ದಂಪತಿಗಳ ಮನಸ್ಸು ಅಷ್ಟು ಸ್ವಚ್ಛವಾಗಿಲ್ಲದುದೇ ಇದಕ್ಕೆ ಕಾರಣ. ಉದ್ಯೋಗದಲ್ಲಿ ಪ್ರತಿಷ್ಠೆಯೂ ಲಾಭವೂ ಉತ್ತಮ. ವ್ಯಾಜ್ಯ ವ್ಯವಹಾರಗಳಲ್ಲಿ ಶತ್ರು ಹತಹೊಂದುವನು. ಸ್ಥಾವರಾಸ್ತಿಯಲ್ಲಿ ಆಗದವರ ಪೀಕಲಾಟಗಳು ಬಹಳ ಏಳಬಹುದು. ಪ್ರವಾಸ ಅಷ್ಟು ನೆಮ್ಮದಿಯದಲ್ಲ. ಭೆಟ್ಟಿ ಪತ್ರ ವ್ಯವಹಾರ ಅಡ್ಡಿಯಿಲ್ಲ. ಮೂಲದ ಕೊನೆಯ ೩ ಮತ್ತು ಪೂರ್ವಾಷಾಢದ ೧ ನೆ ಚರಣಗಳಿಗೆ ಸ್ವಲ್ಪ ತೊಂದರೆ ಹೆಚ್ಚು. ತಾ. ೮, ೯, ೧೦, ೧೧ ಅನುಕೂಲ.

**ಮಕರ**

ನಿಮ್ಮ ಪ್ರಕೃತಿಗಿಂತ ಹೆಂಡತಿ ಮಕ್ಕಳದು ಸ್ವಸ್ಥವಾಗಿರುವದು. ಆದರೆ ಮಕ್ಕಳ ಹಾಗೂ ಕಾಯಿಲೆಗಳ ಉಪಟಳ ಹೆಚ್ಚಾದೀತು. ಉದ್ಯೋಗದಲ್ಲಿ ನೀವು ಅತ್ಯಂತ ಎಚ್ಚರಿಕೆಯಿಂದ ಕಾಲಿಡುವ ಕಾಲವಿದು. ಇಲ್ಲದಿದ್ದರೆ ಪ್ರತಿಷ್ಠೆಗೂ ಲಾಭಕ್ಕೂ ಅತ್ಯಂತ ತೀಕ್ಷ್ಣವಾದ ಹೊಡೆತ ಬೀಳುವಂತಿದೆ. ವ್ಯಾಜ್ಯ ವ್ಯವಹಾರಗಳಲ್ಲಿ ನಿಮಗೆ ಒಳ್ಳೆ ಯಶ. ಪ್ರವಾಸಾದಿ ಕಾರ್ಯಗಳು ತುಂಬ ತೊಂದರೆಯವು. ಶ್ರವಣದ ಕೊನೆಯ ೩ ಮತ್ತು ಧನಿಷ್ಠೆಯ ೧ ನೆ ಚರಣಗಳಿಗೆ ವಿಶೇಷ ತ್ರಾಸವಾಗಬಹುದು. ತಾ. ೮, ೯, ೧೦ ಅನುಕೂಲ.

**ಕುಂಭ**

ನಿಮ್ಮ ಪ್ರಕೃತಿ ಸರಿಯಾಗಿಯೆ ಉಳಿದರೂ ಹೆಂಡತಿ ಮಕ್ಕಳಿಗೆ ಆಗಾಗ್ಗೆ ಕಾಯಿಲೆಯಾಗುವ ಸಂಭವವುಂಟು. ಸ್ಥಿರಾಸ್ತಿಯಲ್ಲಿ ಒಂದು ಅನುಕೂಲ ಮಾತುಕತೆ ನಡೆಯಬಹುದು. ಉದ್ಯೋಗದಲ್ಲಿ ಪ್ರತಿಷ್ಠೆಗೇನೂ ಕಡಿಮೆಯಿಲ್ಲದಿದ್ದರೂ ಲಾಭ ಮಾತ್ರ ಸೊನ್ನೆಯೆಂದೇ ಹೇಳಬೇಕು. ವ್ಯಾಜ್ಯ ಮೊದಲಾದವುಗಳಲ್ಲಿಯೂ ನೀವು ಹಿಂದೇಟು ತಿನ್ನಬೇಕಾದೀತು. ಪ್ರವಾಸಾದಿ ಕಾರ್ಯಗಳಿಗೆ ಅಡ್ಡಿಯಿಲ್ಲ. ಶತತಾರೆಯ ಕೊನೆಯ ೩ ಮತ್ತು ಪೂರ್ವಾಭಾದ್ರದ ೧ ನೆ ಚರಣಗಳಿಗೆ ತುಂಬ ತೊಂದರೆ. ತಾ. ೧೧, ೧೩, ೧೪, ೧೪ ಅನುಕೂಲ.

**ಮೀನ**

ಈ ವರೆಗಿದ್ದ ನಿಮ್ಮ ಉತ್ಸಾಹವು ಇನ್ನು ಮುಂದೆ ಉಳಿಯದೆಂದು ಹೇಳಲು ಬೇಸರವಾಗುತ್ತದೆ. ಆದರೆ ನೀವು ಸುಖ ದುಃಖಗಳನ್ನು ಸಮಬುದ್ಧಿಯಿಂದ ಸಹಿಸಿಕೊಳ್ಳಬಲ್ಲ ಧೈರ್ಯವುಳ್ಳವರಲ್ಲವೆ? ನಿಮ್ಮ ಆರೋಗ್ಯ ಸರಿಯಾಗಿದ್ದರೂ ಹೆಂಡತಿಯದಕ್ಕಾಗಿ ಚಿಂತಿಸಬೇಕಾಗುವದು. ಅಲ್ಲದೆ ಕ್ಷುಲ್ಲಕ ವಿಷಯಗಳಲ್ಲಿ ನಿಮ್ಮಿಬ್ಬರೊಳಗೆ ಮತಭೇದವಾಗುವ ಸಂಭವವಿದೆ. ಉದ್ಯೋಗದಲ್ಲೇನೋ ಪ್ರತಿಷ್ಠೆ, ಲಾಭಗಳು ಅವ್ಯಾಹತವಾಗಿದ್ದರೂ ಪ್ರತಿ ಕೆಲಸದಲ್ಲೂ ತುಂಬ ತೊಂದರೆಗಳು. ವಾದ ಸ್ಪರ್ಧೆಗಳಲ್ಲಿ ನೀವೇ ಕಾಲು ಹಿಂದಿಡಬೇಕಾಗಿ ಬಂದರೂ ಶತ್ರುವೂ ತುಂಬ ಕಂಗಾಲಾಗುವ. ಪ್ರವಾಸ ಮತ್ತು ಭೆಟ್ಟಿ ಪತ್ರವ್ಯವಹಾರಕ್ಕಿಂತ ಲೇಸು. ಉತ್ತರಾಭಾದ್ರೆಯ ಕೊನೆಯ ೩ ಮತ್ತು ರೇವತಿಯ ೧ ನೆ ಚರಣಗಳಿಗೆ ತುಂಬ ತೊಂದರೆ. ತಾ. ೮, ೯, ೧೩, ೧೪ ಅನುಕೂಲ.

## ಅಪರಾಧಿ

(೧೧ ನೇ ಪುಟದಿಂದ)

ನಿಷ್ಠ ಗುಪ್ತ ಸ್ಥಳಕ್ಕೆ ಹೋಗಿ ಪೋಲೀಸರು ಮುತ್ತಿಗೆ ಹಾಕಿದರು. ಆಗ ಸಿಕ್ಕಿದ ಅಲ್ಪ ವೇಳೆಯಲ್ಲಿ ಮೊದಲೇ ಅವನಿಗೆ ಆ ವಿಷಯವನ್ನು ತಿಳಿಸಿ ಉಪಕರಿಸಲು ಓಡಿ ಹೋಗಿದ್ದ ಅವಳು ಅವನೊಡನೆ ಮಾತಾಡುತ್ತಿದ್ದುದನ್ನು ಗುಪ್ತವಾಗಿ ಕೇಳಿದೆ. ಅದರಿಂದ ನನ್ನ ಸಂಶಯ ಪರಿಹಾರವಾಯಿತು. ಮೋಹನನೂ ಶೀಲೆಯೂ ಅಜ್ಞಾನಿಗಳು ಅಥವಾ ಉಜ್ಞಾನಿಗಳು, ಇಷ್ಟೇ ಅಲ್ಲದೆ ವ್ಯಭಿಚಾರಿಗಳಲ್ಲ ಎಂಬುದು ತಿಳಿಯಿತು. ಆಗ ನಾನೇ ಅಪರಾಧಿಯೆಂದು ಅವರೆದುರು ಒಪ್ಪಿಕೊಂಡು ಪಶ್ಚಾತ್ತಾಪವನ್ನು ತೋಡಿಕೊಂಡೆ. ಅವರಿಬ್ಬರಿಗೂ ನನ್ನ ಮೇಲೇರಿದ್ದ ತಾಮಸೀಚಿತ್ತವೃತ್ತಿಯು ಉದ್ರೇಕ ಶಾಂತವಾಯಿತು. ಆದರೆ ಕೆಲಸ ಮಿಂಚಿ ಹೋಗಿದ್ದರಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದ ಮೋಹನನು ಗುಂಡಿನೇಟಿಗೆ ಬಲಿಯಾಗಿ ಪೋಲೀಸರ ವಶವಾಗಬೇಕಾಯಿತು. ನಾನೂ ಅವಳೂ ನನ್ನದೆಂದು ಖಾತ್ರಿಯಾದ ಮಗುವಿನೊಡನೆ ಮನೆಗೆ ನಡೆದೆವು. ಇದರಲ್ಲಿ ಲೋಕದ ದೃಷ್ಟಿಯಲ್ಲಿ ನಾನೇ ಅಪರಾಧಿ, ತಪ್ಪು ತಿಳಿದುಕೊಂಡವ ಎಂಬಂತೆ ನನ್ನ ಕಥೆಯನ್ನು ಬರೆದು ಪ್ರದರ್ಶಿಸಬಹುದೆಂದು ನನಗೆ ತಿಳಿದಿದೆ. ಆದರೆ ನಿಜವಾದ ಅಪರಾಧಿ ನನ್ನ ಹೆಂಡತಿ. ಬೇಕೆಂದೇ ತಪ್ಪು ತಿಳಿವಳಿಕೆಗೆ ಅವಕಾಶ ಕೊಡಲು ಪ್ರಯತ್ನಿಸದಿದ್ದರೂ ಮೌಢ್ಯದಿಂದ, ಪ್ರೇಮವ್ಯವಹಾರದ ಮರ್ಮಜ್ಞಾನವಿಲ್ಲದೆ, ವ್ಯವಹಾರದ ಔಚಿತ್ಯದಲ್ಲಿ ಶಿಕ್ಷಣ ಹೊಂದದೆ, ಅನುಚಿತ ವರ್ತನೆಯಿಂದ, ಅನಾದರ, ಅಲಕ್ಷ್ಯ ಉದ್ವೇಜಕ ವಾಕ್ಸಂಯಮಗಳಿಂದ ನನ್ನ ಮನವನ್ನು ಕಲಕಿ ಉನ್ನತ ಮಟ್ಟದ ಪ್ರೇಮಿಯಾದ ನನ್ನನ್ನು ಅಪಹಾಸ್ಯ, ಅಕೀರ್ತಿಗಳಿಗೆ ಗುರಿಪಡಿಸಿದಳು. ಹೋಗಲಿ. ಇನ್ನೇನು ಮಾಡಲಿ? ಅಂಥವಳನ್ನು ಮದುವೆಯಾದದ್ದು ನನ್ನದೇ ತಪ್ಪಲ್ಲವೆ?"

— ರಸಗಂಗಾಧರ

# ಪ್ರಾಣಿಗಳ ಮೂಲಕ ಸಾರಿಗೆ

ಕಾಟೋಲ (ಮಧ್ಯಪ್ರಾಂತ) ದಿಂದ ಒಬ್ಬ ಪತ್ರಲೇಖಕನು ಹೀಗೆ ಬರೆದಿದ್ದಾನೆ!

"ನೀವು 'ಹರಿಜನ' ಪತ್ರಿಕೆಯ ಲೇಖಗಳಲ್ಲಿ ರೇಲ್ವೆ ಮತ್ತು ಮೋಟಾರು ಸಾರಿಗೆಯ ಸಂಗಡಲೇ ಇತರ ಮಾದರಿಯ ವಾಹನಗಳನ್ನೂ ಉಪಯೋಗಿಸಬೇಕೆಂದು ಸೂಚಿಸಿದ್ದೀರಿ. ಆದರೆ ಯಾಂತ್ರಿಕೀಕರಣವನ್ನು ಸಾಧಿಸುವ ಛಲತೊಟ್ಟ ಸರಕಾರ ತದ್ವಿರುದ್ಧವಾದುದನ್ನೇ ಮಾಡ ಹೊರಟಿರುವಂತಿದೆ. ಬೇಕಾದರೆ ನೀವು ಎಲ್ಲ ನಗರಸಭೆಗಳ ಆಡಳಿತೆಯಲ್ಲಿಯೂ ಇದಕ್ಕೆ ಯಥೇಷ್ಟ ಪ್ರಮಾಣಗಳನ್ನು ಪಡೆಯಬಹುದು. ಎತ್ತಿನ ಮೊದಲಾದ ಗಾಡಿಗಳನ್ನು ತರುವಾಗ ಹಳ್ಳಿಗರು ನಗರಸಭೆಗಳ ಸುಂಕದ ಕಟ್ಟೆಗಳಲ್ಲಿ ಅಧಿಕಾರಿ ದೇವತೆಗಳ ಕೈಯಿಂದ ನಾನಾ ಉಪದ್ರವಗಳಿಗೆ ಒಳಗಾಗಿ ಅವರನ್ನು ಸಂತುಷ್ಟಗೊಳಿಸಬೇಕಾಗುತ್ತಿದೆ. ಆದರೆ ಮೋಟಾರು ಮತ್ತು ರೇಲ್ವೆ ಸಾರಿಗೆಗೆ ಇಂಥ ಯಾವ ತೊಡಕುಗಳೂ ಸಾಮಾನ್ಯವಾಗಿ ಎದುರಾಗುವದಿಲ್ಲ.

"ಇದೇ ಸ್ಥಳವನ್ನೇ ತೆಗೆದುಕೊಳ್ಳಿರಿ. ನಾಗಪುರ ಮತ್ತು ಕಾಟೋಲಗಳ ನಡುವೆ ನಾಗಪುರದಿಂದ ಹೋಗುವ ಕಲ್ಲಿರಿ ಸಾಮಾನು ನೂಲು ಧಾನ್ಯಗಳೇ ಮೊದಲಾದವುಗಳಿಗೂ ಕಾಟೋಲದಿಂದ ಹೋಗುವ ಕಿತ್ತಳೆ ಹಣ್ಣು, ಮಾವಿನ ಹಣ್ಣು ಮೊದಲಾದವುಗಳಿಗೂ . ಮುಖ್ಯವಾದ ಸಾರಿಗೆಯ ಸಾಧನವೆಂದರೆ ಎತ್ತಿನ ಬಂಡಿಯಾಗಿದೆ. ನಾಗಪುರ-ಕಾಟೋಲ ರಸ್ತೆಯ ಒಂದು ಮೈಲಿನಷ್ಟು ಅಂಶವು ಕಲಮೇಶ್ವರ ನಗರ ಸಭೆಯ ಹದ್ದಿನಲ್ಲಿ ಹಾದು ಹೋಗುತ್ತದೆ. ಪ್ರತಿಯೊಂದು ಎತ್ತಿನ ಗಾಡಿಯೂ ಅಲ್ಲಿ ಹಾದು ಹೋಗಬೇಕಾದರೆ ಹೋಗುವಾಗ ಎಂಟಾಣೆ ಬರುವಾಗ ಎಂಟಾಣೆ ಹೀಗೆ ಒಂದು ರೂಪಾಯಿ ಸುಂಕವನ್ನು ತೆರಬೇಕಾಗುತ್ತದೆ. ಆದರೆ ಮೋಟಾರುಗಳಿಗೆ ಈ ಸುಂಕ ಅನ್ವಯಿಸುವದಿಲ್ಲ."

ಪ್ರಸಿದ್ಧ ಹರಿಜನ ಕಾರ್ಯಕರ್ತರಾದ ಶ್ರೀ ವಿ. ಎನ್. ಬರ್ವೆಯವರು ಧುಳೇದಿಂದ ಬರೆಯುತ್ತ ಮೇಲಿನ ಮಾತನ್ನೇ ಬೆಂಬಲಿಸಿದ್ದಾರೆ:

"ರೇಲ್ವೆ ಮತ್ತು ಮೋಟಾರ ಸಾರಿಗೆಯೊಂದಿಗೆ ಇತರ ಮಾದರಿಯ ವಾಹನಗಳನ್ನೂ ಉಳಿಸಿಕೊಂಡು ಹೋಗಬೇಕೆಂದು ನೀವು ಒತ್ತಿ ಹೇಳಿದ್ದು ಒಳಿತಾಯಿತು. ಕೆಲ ದಿನಗಳ ಕೆಳಗೆ ಮುಂಬಯಿಯಲ್ಲಿ ಚಿಮಣಿ ಎಣ್ಣೆಯನ್ನು ಧಾರಾಳವಾಗಿ, ಸಿಕ್ಕಾಪಟ್ಟೆಯೆನಿಸುವಂತೆ, ಹಂಚಿದ್ದರಿಂದ ಜನರು ಕಲ್ಲಿದ್ದಲಿ ಮೊದಲಾದ ಸೌದೆಗಳ ಬದಲು ಚಿಮಣಿ ಎಣ್ಣೆಯನ್ನೇ ಉಪಯೋಗಿಸಿ ಒಲೆಯ ಬದಲು ಸ್ಟೋವಿನಲ್ಲಿ ಅಡಿಗೆ ಮಾಡಿದರೆಂಬ ಸುದ್ದಿ ನಿಮಗೆ ಗೊತ್ತಿದ್ದರೂ ಇರಬಹುದು. ವಿಚಾರಿಸಲಾಗಿ, ಮುಂಬಯಿಯಿಂದ ಹೊರಗೆ ಚಿಮಣಿ ಎಣ್ಣೆಯನ್ನು ಸಾಗಿಸಲು ರೇಲ್ವೆ ಡಬ್ಬಿಗಳೇ ಮೊದಲಾದ ಸೌಕರ್ಯಗಳ ಕೊರತೆಯಿದ್ದ ಕಾರಣ ನಗರದಲ್ಲಿ ತುಂಬಾ ಎಣ್ಣೆ ಉಳಿದುಬಿಟ್ಟಿತ್ತೆಂದೂ ಅದನ್ನು ದಾಟಿಸಿಬಿಡಲು ಹೀಗೆ ಹಂಚಿದರೆಂದೂ ನನಗೆ ತಿಳಿದು ಬಂತು. ಇತರ ವಿಧದ ವಾಹನ ಸೌಕರ್ಯಗಳೂ ಕೆಲಸ ಮಾಡುತ್ತಿದ್ದಿದ್ದರೆ, 'ಮುಂಬಯಿಯಲ್ಲಿ ಧಾರಾಳ, ಹೊರಗೆ ಶೂನ್ಯ' ಎಂಬೀ ಸ್ಥಿತಿ ಉದ್ಭವಿಸುತ್ತಲೇ ಇರಲಿಲ್ಲ. ಪ್ರಾಣಿಗಳ ಮೇಲೆ ಸರಕು ಸಾಗಿಸುವದಕ್ಕಿಂತ ರೇಲ್ವೆ ಮತ್ತು ಮೋಟಾರು ಸಾರಿಗೆ ಅಗ್ಗವಾಗಿರುವದೇ ಒಂದು ಸಮಸ್ಯೆಯಾಗಿ ಬಿಟ್ಟಿದೆ. ಅದನ್ನು ಬಿಡಿಸಬೇಕು."

ಮೊದಲನೆ ಪತ್ರದಿಂದ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳ ಧೋರಣೆ ಹೇಗೆ ಪ್ರಾಣಿಗಳ ಮೇಲೆ ಸರಕು ಸಾಗಿಸುವದನ್ನು ಪ್ರೋತ್ಸಾಹಿಸುವ ಬದಲು ಅದನ್ನು ನಿರ್ನಾಮ ಮಾಡುತ್ತಿದೆಯೆಂದು ಗೊತ್ತಾಗುತ್ತದೆ. ಇದು ಗ್ರಾಮೋದ್ಧಾರಕ್ಕೆ ಘಾತಕ. ಇದನ್ನು ಒಡನೆ ನಿಲ್ಲಿಸಬೇಕು. ಉಪಕಾರಮಾಡುವ ಶಕ್ತಿಯಿಲ್ಲದಿದ್ದರೆ ಅಪಕಾರವನ್ನಾದರೂ ಮಾಡದೆ ಸುಮ್ಮನಿರಬೇಕಲ್ಲವೆ?

ರೇಲ್ವೆ ಮತ್ತು ಮೋಟಾರ ಸಾರಿಗೆ ಅಗ್ಗವಾಗಿರುವದನ್ನು ಎರಡು ದೃಷ್ಟಿಕೋನಗಳಿಂದ ನಾವು ಪರೀಕ್ಷಿಸಬೇಕಾಗುತ್ತದೆ. ಮೊದಲನೆಯದಾಗಿ, ಅದು ಪ್ರಾಣಿಗಳು ಎಳೆಯುವ ವಾಹನಗಳಿಗಿಂತ ಏಕೆ ಅಗ್ಗವಾಗಿದೆಯೆಂದು ವಿಚಾರಿಸೋಣ. ಇದಕ್ಕೆ ಒಂದು ದೊಡ್ಡ ಕಾರಣವೆಂದರೆ ಸರಕಾರದಿಂದಲೂ ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳಿಂದಲೂ ರೇಲ್ವೆ ಮತ್ತು ಮೋಟಾರುಗಳಿಗೆ ಅನವರತ ಮತ್ತು ಅನೇಕ ವಿಧದ ಸಹಾಯ ದೊರೆಯುತ್ತ ಬಂದಿದೆ. ವರ್ಷ ವರ್ಷಾಂತರಗಳ ವರೆಗೆ ರೇಲ್ವೆಗಳಿಗೆ ಆರ್ಥಿಕ ಸಹಾಯವನ್ನೂ ಭರವಸೆಯನ್ನೂ ಕೊಡಲಾಯಿತು. ಮೋಟಾರ ಮತ್ತು ರೇಲ್ವೆ ಸಾರಿಗೆಗೆ ಅವಶ್ಯವಿದ್ದಾಗೆಲ್ಲ ಬೇಕಾಗಿ ಸರಕಾರದವರು ಭೂಮಿಯನ್ನು ವಶಪಡಿಸಿಕೊಳ್ಳುವದಲ್ಲದೆ ಅವುಗಳಿಗೆ ಬೇಕಾದ ರಸ್ತೆಗಳನ್ನೂ ಸ್ವಂತ ವೆಚ್ಚದಿಂದ ಸಮರ್ಪಕವಾಗಿ ಇಟ್ಟಿರುತ್ತಾರೆ. ಕೆಲ ಸ್ಥಳಗಳಲ್ಲಂತೂ ಪಕ್ಕಾ ರಸ್ತೆಗಳ ಮೇಲೆ ಎತ್ತಿನ ಬಂಡಿಗಳಿಗೆ ಪ್ರವೇಶ ಕೂಡ ಇಲ್ಲ. ಶಿಥಿಲವಾಗಿ ನಿರ್ಮಿಸಲ್ಪಟ್ಟ ಹಳ್ಳಿಯ ಗಾಡಿಗಳ ಮೇಲೆ ಹೊರೆ ಹೇರಿಕೊಂಡು ಧೂಳು ಮುಸುಕಿದ ಕಚ್ಚಾ ರಸ್ತೆಯ ಮೇಲೆ ಅವನ್ನು ಎಳೆದುಕೊಂಡು ಹೋಗಬೇಕಾದರೆ ಎತ್ತುಗಳಿಗೆ ಎಷ್ಟು ಶ್ರಮವಾದೀತೆಂದು ಯಾರೂ ಚಿಂತಿಸುವದಿಲ್ಲ. ನೆಮ್ಮದಿಯಾದ ಕೋಚುಗಳನ್ನೂ ಟ್ರಕ್ಕುಗಳನ್ನೂ ವ್ಯಾಗೀನುಗಳನ್ನೂ ಕಟ್ಟಲು ವಿಶಾಲವಾದ ಕಾರಖಾನೆಗಳಿವೆ. ಗವರ್ನರರೂ ಮಂತ್ರಿಗಳೂ ಅಂಥ ಕಾರಖಾನೆಗಳ ಉದ್ಘಾಟನ ಸಮಾರಂಭಗಳನ್ನು ನೆರವೇರಿಸುತ್ತಾರೆ. ಈ ಉತ್ಸವಗಳಿಗೆ ಪ್ರತಿಯೊಂದಕ್ಕಾಗುವ ವೆಚ್ಚ ನೂರುಗಟ್ಟಲೆಯಲ್ಲ, ಅದಕ್ಕೂ ಹೆಚ್ಚು. ಆದರೆ ಹಳ್ಳಿಗಳ ಪೂರ್ವಜರು ಶತಮಾನ ಶತಮಾನಗಳ ಹಿಂದೆ ರೂಪಿಸಿ ನಿರ್ಮಿಸಿದ್ದ ಎತ್ತಿನ ಗಾಡಿಗಳ ರಚನೆಯನ್ನು ಸುಧಾರಿಸಲು ಯಾರೂ ಪ್ರಯತ್ನಿಸಿಲ್ಲವಾದ ಕಾರಣ ಅವು ಅದೇ ಪ್ರಾಚೀನ ಮತ್ತು ಪ್ರಾದೇಶಿಕ ರೂಪದಲ್ಲೇ ಉಳಿದಿವೆ. ಗಟ್ಟಿಮುಟ್ಟಾದ ಎತ್ತುಗಳ ಪೀಳಿಗೆಯನ್ನು ಉಂಟುಮಾಡಲಿಕ್ಕೂ ಏನೂ ಯತ್ನವಾಗಿಲ್ಲ. ಸುರತದಲ್ಲಿ ಒಂದಾನೊಂದು ಕಾಲದಲ್ಲಿ ಗಾಡಿ ಮತ್ತು ನೇಗಿಲಿನ ಎತ್ತುಗಳಿಗಿಂತ ಭಿನ್ನವಾದ ಜೂಜಿನ ಅಥವಾ ಶರ್ಯತ್ತಿನ ಎತ್ತುಗಳ ಪೀಳಿಗೆಯನ್ನು—ಯುರೋಪಿನಲ್ಲಿ ಕುದುರೆಗಳನ್ನು ಹೇಗೋ ಹಾಗೆ. ಸಾಕುವ ಪರಿಪಾಠವಿತ್ತು. ಇಂಥ ತಾರತಮ್ಯವನ್ನು ಬೇರೆಕಡೆಗಳಲ್ಲೂ ಮಾಡುತ್ತಿದ್ದರೋ ಇಲ್ಲವೋ ನಾನರಿಯೆ. ರಸ್ತೆಗಳನ್ನು ಉಪಯೋಗಿಸಲು ಜಡ ವಸ್ತುಗಳಾದ ರೇಲ್ವೇ ಮೋಟಾರುಗಳಿಗಿಂತ ಎತ್ತುಗಳಿಗೇ ಹೆಚ್ಚು ಹಕ್ಕಿದೆಯೆಂದು ಮನಗಂಡರೆ, ಯಾಂತ್ರಿಕ ಸಾರಿಗೆ ಈಗಿನಷ್ಟು ಅಗ್ಗವಾಗಿ ಉಳಿಯಲಾರದು. ಒಂದು ರೇಲ್ವೆ ಗಾಡಿಯನ್ನಾಗಲಿ ಮೋಟಾರು ಟ್ರಕ್ಕನ್ನಾಗಲಿ ಹಳ್ಳಿಯ ಒರಟು ರಸ್ತೆಯ ಮೇಲೆ ಓಡಿಸುವ ಪ್ರಯತ್ನ ಮಾಡಿ, ಅದನ್ನು ಒಂದು ಮೈಲು ದೂರ ನಡೆಸಲು ಎಷ್ಟು ವೆಚ್ಚಬಂದೀತೆಂದು ಗುಣಿಸಿ ನೋಡಲಿ.

ಎರಡನೆಯದಾಗಿ ನಾನು ನನ್ನ ಲೇಖದಲ್ಲಿ ತೋರಿಸಿಕೊಟ್ಟಿರುವಂತೆ, ಈ ಪ್ರಶ್ನೆಯನ್ನು ಕೇವಲ ಹಣರೂಪದ ವೆಚ್ಚದ ಆಧಾರದಿಂದ ತೀರ್ಮಾನಿಸುವದು ಸರಿಯಲ್ಲ. ರೇಲ್ವೆ ಮತ್ತು ಮೋಟಾರು ಸಾರಿಗೆ ಪದ್ಧತಿಗಳು ಮಾತ್ರವೇ ನಮ್ಮ ದೇಶದ ಅವಶ್ಯಕತೆಗಳನ್ನು ಪೂರೈಸಲು ಸಾಲವೆಂದು ಮನವರಿಕೆಯಾದ ವೇಳೆ, ಯುದ್ಧಕಾಲದಲ್ಲಿ ಹೇಗೋ ಹಾಗೆ, ಹಣದ ಹೆಚ್ಚುವೆಚ್ಚೇ ಬರಲಿ ದೇಶದ ಸಮಸ್ತ ಜನಶಕ್ತಿ ಪ್ರಾಣಿಶಕ್ತಿಗಳನ್ನೂ ಪೂರ್ಣ ಉಪಯೋಗಕ್ಕೆ ತರುವದು ಕ್ರಮಪ್ರಾಪ್ತವಾಗುವದಿಲ್ಲವೆ? ಯುದ್ಧಕಾಲದಲ್ಲಿ ಸೈನಿಕರಿಗಾಗಿ ಉಣ್ಣೆಯ ಅಂಗಿಗಳನ್ನೂ ಕಾಲುಚೀಲಗಳನ್ನೂ ಕೈಹೆಣಿಗೆಯಿಂದ ತಯಾರಿಸುವದರಿಂದ ಮೊದಲ್ಗೊಂಡು ಎಲ್ಲ ಮಾದರಿಯ ಉತ್ಪಾದನೋಪಾಯಗಳನ್ನೂ ವಿನಿಯೋಗಿಸಿಕೊಳ್ಳಲಾಗುತ್ತದೆ. ಸೈನ್ಯದ ವೆಚ್ಚ ಎಷ್ಟೇ ಬಂದರೂ ಅದನ್ನು ಸ್ಥಿರಿಸಲು ಸಿದ್ಧರಾಗುತ್ತೇವೆ. ಏಕೆಂದರೆ ಹಾಗೆ ಮಾಡದಿದ್ದರೆ ಪರಚಕ್ರದ ದಾಳಿಯಾಗಬಹುದೆಂದು ಜನರೂ ಸರಕಾರವೂ ಸಕಾರಣವಾಗಿಯೋ ಅಕಾರಣವಾಗಿಯೋ ನಂಬಿರುತ್ತಾರೆ. ಗ್ರಾಮೋದ್ಯೋಗಗಳ ಮತ್ತು ಪ್ರಾಣಿ ಮೂಲಕ ಸಾರಿಗೆಯ ಸಮಸ್ಯೆಯನ್ನೂ ಇದೇ ದೃಷ್ಟಿಯಿಂದ ನೋಡಬೇಕು. ಪ್ರೇಮಪಾತ್ರನಾದ ಬಂಧುವೊಬ್ಬನು ಸಾವಿನ ದವಡೆಯಲ್ಲಿ ಸಿಲುಕಿದಾಗ ತನ್ನ ಪರಿಶ್ರಮವೂ ತನ್ನ ಅಳವು ಮೀರಿದ ವೆಚ್ಚಕ್ಕೀಡು ಮಾಡ್ಬರದನ್ನು ಸಹಿಸುತ್ತಾನೆ. ಯುದ್ಧ ಪ್ರಸಂಗದಲ್ಲಿ ಯಾವ ಜನ-ಧನ ಬಲಿದಾನವೂ ಅತಿರೇಕವೆನಿಸುವದಿಲ್ಲ. ಈ ಸಮಸ್ಯೆಗೂ ಅದೇ ದೃಷ್ಟಾಂತವನ್ನು ಅನ್ವಯಿಸಬೇಕು.

ಧೋರಣೆಗೆ ಸಂಬಂಧಿಸಿದ ವಿಚಾರಗಳನ್ನು ಅಂದಾಜು ಪತ್ರದ ಅಳತೆಗೆ ಸರಿಯಾಗಿ ತೂಗ್ಗಿಸಲಾಗುವದಿಲ್ಲ; ಅಂದಾಜುಪತ್ರವನ್ನೇ ಧೋರಣೆಗೆ ಸರಿ ಹೋಗುವಂತೆ ಅಳವಡಿಸಬೇಕಾಗುವದು. ರಾಷ್ಟ್ರವು ಯುದ್ಧಕ್ಕಿಳಿಯಬೇಕೆಂದು ಅಥವಾ ದೊಡ್ಡ ಯುದ್ಧಸಾಮಗ್ರಿ ಕಾರಖಾನೆಗಳನ್ನು ಕಟ್ಟಬೇಕೆಂದು ಮನಸು ಮಾಡಿದರೆ ಅದಕ್ಕೆ ಬೇಕಾದ ಹಣವನ್ನು ಹೇಗಾದರೂ ದೊರಕಿಸಿಕೊಳ್ಳುವುದು. ಆಹಾರೋತ್ಪಾದನೆಯನ್ನು ಹೆಚ್ಚಿಸುವುದಕ್ಕೆ ಸಮೃದ್ಧವಾದ ಗ್ರಾಮಜೀವನ, ವಿಪುಲವಾದ ಕೃಷಿ, ಕೊಡ ಹಾಲಿನ ದನಗಳು, ಬಲಿಷ್ಠವೂ ಸುಂದರವೂ ಆದ ಎತ್ತು ಕತ್ತೆ ಒಂಟೆ ಕುದುರೆಗಳು, ಸುಧಾರಿಸಿದ ನೇಗಿಲು, ಉತ್ತಮವಾದ ಚರಕ, ಮಗ್ಗ, ಬಂಡಿಗಳೇ ಮೊದಲಾದ ಸಾಧನ-ವಾಹನಗಳು ಅತ್ಯವಶ್ಯಕವೆಂದು ರಾಷ್ಟ್ರಕ್ಕೆ ಮನವರಿಕೆಯಾದರೆ ಅದು ತನ್ನ ಅಂದಾಜು ಪತ್ರವನ್ನು—ಅಷ್ಟೇ ಏಕೆ, ತನ್ನ ಶಿಕ್ಷಣ, ಸಂಶೋಧನ, ಸಾಮಾಜಿಕ ರೂಢಿ ನಡೆವಳಿಗಳು, ವಿವಾಹ ಮತ್ತು ಉತ್ತರಾಧಿಕಾರದ ಕಾಯದೆಗಳು ಮೊದಲಾದವುಗಳನ್ನು ಕೂಡ ಮೇಲಿನ ಅವಶ್ಯಕತೆಗೆ ಸರಿಯಾಗುವಂತೆ ಪುನರ್ಘಟಿಸಲು ಸಿದ್ಧವಾಗಬೇಕು. ಅಗ್ಗವೆಂಬುದು ತುಂಬ ಮಾಯಾವಿಯಾದ ಶಬ್ದ. ಪ್ರಾಣಘಾತಕವಾಗುವದು ಹೇಗೆ ತಾನೆ ಅಗ್ಗವಾದೀತು? ನಾವು ನಡೆಸಿದ ಕೊಲೆ-ಕೊಳ್ಳೆಗಳಿಗೆ ಎಷ್ಟು ಬೆಲೆ ತೆರಬೇಕಾಯಿತೆಂದು ನಮಗೀಗ ಮೂರು ವರ್ಷಗಳ ಕಹಿಯಾದ ಅನುಭವದಿಂದ ಗೊತ್ತಾಗಿದೆ. ಈ ಭೂಮಿ ಸಾಕಷ್ಟು ತಣಿದು ಸ್ಥಿಮಿತಕ್ಕೆ ಬಂದ ಮೇಲೆಯೆ ಇಲ್ಲಿ ಜೀವರಾಶಿ ಉದ್ಭೂತವಾಯಿತು; ಅದು ವಿಕಾಸಹೊಂದಿ, ವಸಂತ ಕಾಲದಲ್ಲಿ ಗಿಡಮರಗಳು ಹೂಬಿಡುವಂತೆ, ಮಳೆಗಾಲದಲ್ಲಿ ಹೊಲಹಸಲೆಗಳು ಫಲಬಿಡುವಂತೆ ಆತ್ಮಾಭಿವ್ಯಕ್ತಿ ಮಾಡಿಕೊಳ್ಳಲು ಅವಕಾಶವಾಯಿತು. ಆದರೆ ಕೆಲ ದಿನಗಳ ಹಿಂದೆ ಮುಂಬಯಿಯಲ್ಲಿ ಮುರಿದು ಬಿದ್ದ ಹುಚ್ಚು ವಿಮಾನದಂತೆ, ಬಿರುಗಾಳಿಗಳ ಬೆಂಬತ್ತಿ ಹಾರಾಡುವ ಜಗತ್ತಿಗೆ ಇಂಥ ಆತ್ಮವಿಕಾಸ ಕೈಗೂಡುವ ವಿಷಯವಲ್ಲ. ವೇಗಶೀಲವಾದ ಯಂತ್ರಗಳು ಪ್ರಚಂಡ ಪ್ರಮಾಣದ ಉತ್ಪಾದನೆ, ರಭಸದ ಸಾರಿಗೆಯ ಸಾಧನಗಳೇ ಮೊದಲಾದವುಗಳಿಂದ ಮಾನವ ಕುಲವು ಸುಳಿಗಾಳಿ ಬಿರುಗಾಳಿಗಳನ್ನು ಉಂಟುಮಾಡುತ್ತ ಹೊರಟರೆ ಮಾನವ ಜೀವನದ ವಿಕಾಸವಾಗಲಿ ಸಮೃದ್ಧಿಯಾಗಲಿ ಸಾಧ್ಯವೇ ಇಲ್ಲ.

ವರ್ಧಾ     ಕಿ. ಘ. ಮಶ್ರೂವಾಲಾ
೨೪-೭ ೧೯೪೯

## ಆದಾಯದ ಹಸಿವು

"ಭಾರತದಲ್ಲಿ ಸಂಚರಿಸುವ ವಿದೇಶೀಯರಿಗೆ ಈ ದೇಶದಲ್ಲಿ ವಿಹಾರಿಸಂಚಾರಕ್ಕೆ ಪ್ರೋತ್ಸಾಹ ನೀಡುವ ಕಾರ್ಯದ ಅಂಗವಾಗಿ ಪೇಯಗಳಿಗಾಗಿ ಧಾರಾಳವಾಗಿ ಅನುಮತಿಪತ್ರವನ್ನು ಕೊಡಲಾಗುವದು." (ಟೈಮ್ಸ್ ಆಫ್ ಇಂಡಿಯಾ, ೨೩-೭-೪೯).

ಹಸಿದವನು ಏನು ಮಾಡುವದಿಲ್ಲ? (ಬುಭುಕ್ಷಿತಃ ಕಿಂ ನಕರೋತಿ...) ಎಂಬ ಒಂದು ಸಂಸ್ಕೃತದ ಗಾದೆಯಿದೆ. ಸಂಸ್ಕೃತದ ಧಾರ್ಮಿಕ ಸಾಹಿತ್ಯದಲ್ಲಿ ವಿಶ್ವಾಮಿತ್ರನಂಥ ಬ್ರಹ್ಮರ್ಷಿಯು ಚಾಂಡಾಲನ ಗುಡಿಸಿಲಿನಿಂದ ಸತ್ತನಾಯಿಯ ಹಿಂಗಾಲಿನ ಮಾಂಸವನ್ನು ಕದ್ದನೆಂದು ಉಲ್ಲೇಖವಾಗಿದೆ! ಆದುದರಿಂದ ವಿದೇಶೀಯ ವಿಹಾರಿಗಳನ್ನು ನಮ್ಮ ದೇಶಕ್ಕೆ ಆಕರ್ಷಿಸಲು-ಕೆಟ್ಟದ್ದಿರಲಿ, ಒಳ್ಳೆಯದಿರಲಿ. ಅವರಿಗೆ ಬೇಕಾದ್ದನ್ನು ನಾವು ಒದಗಿಸಿಕೊಡಬಹುದ.! ಇಡೀ ದೇಶವೇ ಮದ್ಯಪಾನವನ್ನು ಬಿಟ್ಟರೂ ವಿದೇಶೀಯರಿಗೆ ಹೋದಲ್ಲೆಲ್ಲ ಕುಡಿದು ಹುಚ್ಚಾಗಲು ಸಾಧ್ಯವಾಗುವದು. ಅವನು ಮತ್ತೇನು ಬೇಕೆಂದಾನು, ಅವನಿಗೆ ಇನ್ನೇನನ್ನು ನಾವು ಕೊಟ್ಟೇವು ಎಂಬುದನ್ನು ಹೇಳಲು ಬರದು! ಅವನ ದುಡ್ಡು ನಮಗೆ ಬೇಕಾಗಿದೆ, ಅದೇ ಇದಕ್ಕೆ ಕಾರಣ. ಕುಡುಕರೂ ಭೋಗಿಗಳೂ ನಮ್ಮ ದೇಶಕ್ಕೆ ಹೆಚ್ಚು ಹೆಚ್ಚಾಗಿ ಬಂದಂತೆ ನಮಗೆ ಹಣದಲ್ಲೂ ಕೆಟ್ಟತನದಲ್ಲೂ ಹೆಚ್ಚು ಹೆಚ್ಚು ಲಾಭವಾಗುವುದು!

## ಮುಕ್ತಿಯೆಂಬ ಆಭಾಸ

ಇತ್ತೀಚೆಗೆ ಇಂಡಿಯ ಪತ್ರಿಕೆಗಳಲ್ಲಿ ಮುಕ್ತ್ಯ... ಸುದ್ದಿಯು ಪ್ರಕಟವಾಗಿದೆ—

"ಮದ್ಯಪಾನಪ್ರತಿಬಂಧ ... ಜೂಜಾಟಗಳ ಪ್ರತಿಬಂಧ ... ಲಾದ ಸುಧಾರಣೆಗಳಲ್ಲಿ ... ಯಿಂತ ಮುಂದುವರಿಯಬೇಕೆಂದು ... ಮಂತ್ರಿಗಳು ... ಸಲಹೆಮಾಡಿದ್ದಾರೆಂದು ... ಸದ್ಯದ ಪರಿಸ್ಥಿತಿಯಲ್ಲಿ ... ಅಟ್ಟ (ಟರ್ಫ್ ಕ್ಲಬ್ಬು)ಗಳನ್ನು ... ಬಿಡುವದು ಅವಶ್ಯವಾಗಿದೆಯೋ ... ದನ್ನು ವಿಚಾರ ಮಾಡಬೇಕೆಂದು ... ತಿಹರು ಇವರು ... ಮಂತ್ರಿಗಳಿಗೆ ಪ್ರಶ್ನಿಸಿದರೆಂದೂ ... ಬರುತ್ತದೆ. ಸಂಪೂರ್ಣ ಮದ್ಯಪಾನ ... ಇಂಥ ಮತ್ತು ಜೂಜಾಟದ ... ಗಳನ್ನು ಮುಚ್ಚಿಹಾಕುವದಕ್ಕೆ ... ಪ್ರಾಶಸ್ತ್ಯಕ್ಕಿಂತ ಹೆಚ್ಚು ... ವನ್ನು ಸದ್ಯದ ಆರ್ಥಿಕ ಪರಿಸ್ಥಿತಿ ... ಸುಧಾರಣೆ ಮತ್ತು ಆಹಾರ ... ಕೊಡತಕ್ಕದ್ದೆಂದು ಅವರು ಅಭಿಪ್ರಾ... ಪಟ್ಟರೆಂದು ಹೇಳಲಾಗುತ್ತಿದೆ. ... ಇಷ್ಟೊಂದು ವಿಪರೀತವಾ... ಯಾವ ಸುಧಾರಣೆಗಳನ್ನು ... ಬಹುದೋ ಅಂಥ ಕೆಲ ಸುಧಾರಣೆ ... ಸ್ವಲ್ಪ ಕಾಲಕ್ಕಾಗಿ ನಿಲ್ಲಿಸಬೇಕೆಂದೂ ... ಅವರು ಸಲಹೆ ಕೊಟ್ಟರಂತೆ. ಕುದುರೆ ... ಕಟ್ಟೆಗಳನ್ನು ಮುಚ್ಚಿ ಬಿಡುವದರಿಂದ ... ದ ರಕ್ಷಣೆ ಮತ್ತು ನಾಗರಿಕ ಅವಶ್ಯಕ ... ಗಾಗಿ ಅವಶ್ಯವಾಗಿರುವ ಕುದುರೆಯ ... ಪೋಷಣೆಯ ಮೇಲೆ ಅತ್ಯಂತ ... ಪರಿಣಾಮವುಂಟಾಗಬಹುದೆಂದೂ ... ಹೇಳಿದರೆಂದು ತಿಳಿಯುತ್ತದೆ."

ಈ ವರದಿಗೆ ವಿಷಾದರೂ ... ಇದನ್ನೋದುವದು ವಿಷಾದಕರ ... ಯಾವದೇ ಮಾರ್ಗದಿಂದ ಧನ ಸಂ... ಮಾಡಬೇಕೆಂಬ ಹುಚ್ಚು ಪ್ರಯತ್ನ ... ಸಂಪದಭಿವೃದ್ಧಿಯ ಧ್ಯೇಯವನ್ನು ... ಮುಟ್ಟಲಾರೆವು. ನಮಗೀಗ ಬೇಕಾದುದು ... ಹೆಚ್ಚು ಆಹಾರ ಪದಾರ್ಥಗಳು ಮತ್ತು ... ಗಳ ಉತ್ಪಾದನೆಯಲ್ಲದೆ ಹೆಚ್ಚು ಮದ್ಯ ... ಮತ್ತು ವಿಲಾಸಭೋಗಗಗಳಲ್ಲ. ಮದ್ಯ ... ಮತ್ತು ಸಂಪತ್ತು ಸಮರಸವಾಗಿ ... ದು ಕೂಡಿ ನಡೆಯವು.

ಜೂಜಾಟದ ಕುದುರೆಯಿಂದ ದೇಶದ ... ರಿಕ ಅವಶ್ಯಕತೆಯು ಪೂರೈಸಲ್ಪಡುವ ... ಸೈನ್ಯಶಾಖೆಯಲ್ಲಿಯೂ ಈಗ ಅದು ... ರಣವಾಗಿ ನಿರುಪಯುಕ್ತವಾದಂತಾಗಿ ... ಹಿಂದುಸ್ತಾನದ ಸೈನ್ಯಶಾಖೆಗಾಗಲಿ ... ಗಾಗಲಿ ಅತ್ಯಂತ ಉಪಯುಕ್ತವಾದ ಪ್ರಾಣಿ ... ದರೆ ಅಕಳು ಮತ್ತು ಎತ್ತು. ಅದರೆ ... ಅಲಕ್ಷಿಸಲಾಗುತ್ತದೆ. ಮತ್ತು ... ಗುತ್ತದೆ. ಪರಿಸ್ಥಿತಿ ಹೀಗಿರುವಾಗ ರಾಷ್ಟ್ರ ... ಗಾಗಿ ಮತ್ತು ದೇಶದಲ್ಲಿಯ ನಾಗರಿಕರ ... ಕತೆಗಳಿಗಾಗಿ ಕುದುರೆಜೂಜಾಟದ ... ಗಳನ್ನು ಮುಚ್ಚಬೇಡಿರೆಂದು ಹೇಳಲಾಗು... ಈ ಧೋರಣವನ್ನು ಅದೆಂತು ... ಬಹುಮಾದುದ್ದಾರ್ಥಗಳಿಂದ ... ದಿಸಿದ್ದಾದರೆ ಜೂಜಾಡುವದಕ್ಕಾಗಿ ... ಹಣ ಜನತೆಯಲ್ಲಿ ಉಳಿಯುವುದೆಂ... ಹೊಸದಾಗಿ ಹೇಳುವದು ಅವಶ್ಯವೆ?

ಉದ್ಯೋಗ ಧಂದೆಗಳಲ್ಲಿ ಹಣವನ್ನು ... ಶ್ರೀಮಂತರಲ್ಲಿ ಸಾಕಷ್ಟು ನಗದು ಹಣ ... ವೆಂದು ನಂಬಿಕೆಯುಂಟಾಗುವಂತೆ ... ಹೇಳಲಾಗುತ್ತದೆ. ಹೀಗಿದ್ದರೂ ಮದ್ಯ ... ದಲ್ಲಿ ಮತ್ತು ಕುದುರೆ ಜೂಜಾಟದಲ್ಲಿ ... ಹಾಕಲು ಲಕ್ಷಗಟ್ಟಲೆ ರೂಪಾಯಿಗಳು ... ಪಕ್ಕದ ಇದೆ! ಎಲ್ಲ ದರ್ಜೆಯ ಅಧಿಕಾರಿ ... ವ್ಯಾಪಾರಸ್ಥರು, ಕಾಲೇಜು ವಿದ್ಯಾರ್ಥಿ ... ಅಲ್ಲದೆ ಜನಸಾಮಾನ್ಯರಲ್ಲಿ ಮದ್ಯ ...

—ಇ ಜೆಯು ...

ವಿಹಾರಿಗೆ ಮದ್ಯಪಾನ ಮಾಡಲು ... ಗಾರರೂ ಅವನ್ನು ಒದಗಿಸಲು ... ಬೇಕಾಗುವುದರಿಂದ ಅವರಿಗೂ ... ವಿನ್ನೇಂಟಲು ಅನುಮತಿ ... ತೋರುತ್ತದೆ!

ಜಪಾನ ಹಾಗೂ ಮತ್ತು "ದೇಶ ... ಜಪ್ಪು ಸಪ್ಪು ಎಂಥ ... ಗಲು ಹಚ್ಚುವ ... ನಾವಾದಿಗಳು!

ವರ್ಧಾ, ೨೩-೭-೪೯ — ಕಿ. ಘ. ...

# ಗ್ರಾಮ ಸೇವೆ

"ಗ್ರಾಮ" ಎಂದರೆ ಗ್ರಾಮಾಂತರಗಳಲ್ಲಿ ವ ಸಣ್ಣ 'ಸಣ್ಣ ವಸತಿ ಸ್ಥಾನಗಳೆಂದು ಮಾನ್ಯವಾಗಿ ತಿಳಿಯಲಾಗಿಂತಿದೆ. ಹಿಂದು ಸದಲ್ಲಿ ಲಕ್ಷಗಟ್ಟಿ ಹಳ್ಳಿಗಳಿವೆ. ಸಾಮಾನ್ಯ ಗಿ ಈ ಹಳ್ಳಿಗಳಲ್ಲಿಯ ಜನರು ಸಣ್ಣ ಗುಡಿ ಸಲುಗಳಲ್ಲಿ ಇರುತ್ತಾರೆ; ಅವರಲ್ಲಿ ಬಹುಶಃ ನೆರೂ ಒಕ್ಕಲತನವನ್ನೆ ಅವಲಂಬಿಸುವರಲ್ಲದೆ ಕೂಲಿಗರ ಜೀವನವನ್ನೇ. ಸಾಗಿಸುವರು. ಕ್ಕಲತನಕ್ಕೆ ಪೂರಕವಾಗುವ ಹಲವು ದ್ಯೋಗಗಳು ಹಳ್ಳಿಗಳಲ್ಲಿ ಇದ್ದರೂ ಒಕ್ಕಲತನವೇ ಮುಖ್ಯವಾದ ಹೋರೆಯು. ಮಾನ್ಯವಾಗಿ ಈ ಹಳ್ಳಿಗಳಿಗೆ ಯಾವ ಸುಖ ಕರ್ಯಗಳೂ ಇರುವದಿಲ್ಲ. ವೈದ್ಯಕೀಯ ಕರ್ಯವಿಲ್ಲ, ರಸ್ತೆ ಬೀದಿಗಳಿಲ್ಲ ಮತ್ತು ಬಹಳ ಲ್ಪ ಹಳ್ಳಿಗಳಲ್ಲಿ ಶಾಲೆಗಳು ಇರುತ್ತವೆ. ಗಾಂಧೀಜಿಯು ತಮ್ಮ ಮನಸ್ಸಿನಲ್ಲಿ ಇಂಥ ಳ್ಳಿಗಳಉದ್ಧಾರವನ್ನೇ ಇಟ್ಟುಕೊಂಡಿದ್ದರು. ವರ ಹೃದಯವು ಇಂಥ ಗ್ರಾಮವಾಸಿಗಳ ಸ್ಯಾಣಕ್ಕಾಗಿಯೇ ಅಷ್ಟೊಂದು ಚಡಪಡಿಸುತಿ ತು. ಹಿಂದುಸ್ತಾನದ ಸಳ್ಳಿಗಳಲ್ಲಿ ವಾಸಿಸು ವ ಹೆಣ್ಣುಮಕ್ಕಳ ಮತ್ತು ಮಕ್ಕಳ ಕಲ್ಯಾಣಕ್ಕಾಗಿಯೇ ಕಸ್ತೂರಬಾ ರಾಷ್ಟ್ರೀಯ ಯನ್ನು ಕೂಡಿಸಿದ್ದಾಯಿತು. ಇದಕ್ಕಾಗಿ ೦೦ ಕ್ಕಿಂತ ಕಡಮೆ ಜನಸಂಖ್ಯೆ ಇರುವ ಹಳ್ಳಿ ನ್ನೇ ಆರಿಸಿಕೊಂಡದ್ದಾಗಿದೆ. ಇಂಥ ಸಣ್ಣ ಳ್ಳಿಗಳಲ್ಲಿಯೆ ಹಳೆಯ ಮತ್ತು ಅಪಾಯ ರಕವಾದ ಸಾಮಾಜಿಕ ರೂಢಿ, ಅಂಧ ಪರಂ ಗಳು ಇರುವವು; ಇಂಥ ಹಳ್ಳಿಗಳಲ್ಲಿಯ ರು ತೀವ್ರ ಅಜ್ಞಾನದಲ್ಲಿ ಮುಳುಗಿರುವರು. ಥವರ ಕಲ್ಯಾಣ ಮಾಡುವದೆ ಅತ್ಯವಶ್ಯ ಗಿದೆ.

೩೦೦೦ ದಿಂದ ೧೦೦೦೦ ಇಲ್ಲವೆ ೧೫೦೦೦ ಜನ ಖ್ಯೆಯುಳ್ಳ ಪ್ರದೇಶಗಳನ್ನು ಹಳ್ಳಿಗಳಲ್ಲಿ ಸಾವೇಶಗೊಳಿಸಬಾರದು. ಅಲ್ಲಿ ನೂರು ಆಲ್ಲದಿದ್ದರೂ ಅನೇಕ ಪಕ್ಕಾ ಮನೆಗಳಿರು ವೆ. ಆ ಹಳ್ಳಿಗಳಲ್ಲಿ ಆಸ್ಪತ್ರೆಗಳೂ ಚಿಕಿತ್ಸಾ ಲಯಗಳೂ ಇವೆ. ಇಂಟರಮೀಡಿಯೇಟ ಲೇಜುಗಳಿಲ್ಲದಿದ್ದರೂ ಹಾಯಸ್ಕೂಲು ಂಟು. ಅನೇಕ ಅಂಗಡಿಗಳು ಇರುವವು; ರುವ ಜನರು ವಿವಿಧ ಉದ್ಯೋಗ ಧಂದೆ ನ್ನು ಮಾಡುತಿರುವರು. ಅವರು ಪೂರ್ಣ ಗಿಯಾಗಲಿ ಇಲ್ಲವೆ ಅರ್ಧಮರ್ಧವಾಗಲಿ ಒಕ್ಕಲತನವನ್ನವಲಂಬಿಸುವದಿಲ್ಲ. ಸಮೀಪ ಇರುವದರಿಂದ ಅದಕ್ಕೆ ಅವುಗಳನ್ನು ಸೇರಿಸಿದ್ದಾದ್ದರೆ ಕಲಕತ್ತೆಗೆ ಅವು ಕೊಳಚಿ ಪ್ರದೇಶಗಳೆನಿಸಬಹುದು. ಅದರೂ ಅವು ಹಳ್ಳಿ ಲ್ಲ. ಅವುಗಳಲ್ಲಿ ಅನೇಕ ಸ್ಥಳಗಳಲ್ಲಿ ವಿವಿಧ ರಿ ಸಂಸ್ಥೆಗಳಿರುವವು. ಕೆಲವು ಹಳ್ಳಿಗಳಿಗೆ ನಗರಸಭೆಗಳೂ ಇರುವವು. ಕಲಕತ್ತೆ ಹೌರಾದ ಸಮೀಪಕ್ಕೆ ಇರುವ ಆ ಳುಗಳಲ್ಲಿಯ ಅನೇಕ ಜನರು ಕಚೇರಿಯ ಗಾರರೆಂದಾಗಲಿ ಬೇರೆ ನೋಕರರೆಂದಾ ದಿನವೂ ಕಲಕತ್ತೆಗೆ ಬರುತಿರುವರು. ಸ್ಥಳಗಳನ್ನು ಹಳ್ಳಿಗಳೆಂದು ಕರೆ ವದು ತಪ್ಪು. ಇಂಥ ಸ್ಥಳಗಳನ್ನು ಮೋದ್ಧಾರ ಕೇಂದ್ರಗಳನ್ನಾಗಿ ಮಾರ್ಪಡಿ ದಂತೂ ಮಹಾಹಾಸ್ಯಾಸ್ಪದ. ರೋಟರಿ ಕ್ಲಬ್ಬಿನ ಸ್ಯರು ಗ್ರಾಮೋದ್ಧಾರ ಚಟುವಟಿಕೆ ನ್ನು ಕೈಕೊಳ್ಳಬಯಸುತಿದ್ದರೆ, ತಮ್ಮ ಚಟುವಟಿಕೆಗಳಿಗಾಗಿ ನಿಜವಾಗಿ ಹಳ್ಳಿಗಳೆನಿಸುವ ದು ಅಥವಾ ಎರಡು ಹಳ್ಳಿಗಳನ್ನು ಆರಿಸಿ ಳ್ಳಬೇಕೆಂದು ನಾನು ಸೂಚಿಸಬಯು ಸುತ್ತೇನೆ.

ನ್ನ ಜೊತೆಯ ರೋಟರಿ ಕ್ಲಬ್ಬಿನವರೊಡನೆ ಇನ್ನೊಂದು ಅನುಭವವನ್ನು ತೆಗೆದು ಳ್ಳಬಯಸುತ್ತೇನೆ. ಈ ಸಾಮಾಜಿಕ ಯೋಗಕ್ಷೇಮದ ಕೆಲಸದಲ್ಲಿ ಹಣ ಗಣ್ಯವಲ್ಲ ನನಗೆ ತಿಳಿದುಬಂದಿದೆ. ನಾವು ಕೆಲಸ ಕೊಡಬೇಕೆಂದಿರುವವರೊಡನೆ ವೈಯ ಕ್ತಿಕವಾಗಿ ತಾದಾತ್ಮ್ಯ ಹೊಂದಲು ಪ್ರಯತ್ನಿ ವದೇ ಮುಖ್ಯವಾದುದು. ನಿಮ್ಮ ಸ್ವಂತ ದರ್ಶದಿಂದ ಮತ್ತು ತತ್ತೋಪದೇಶದಿಂದ ವರೊಡನೇ ಬದುಕಿ ಬಾಳಿದರೆ ಹಳ್ಳಿಗರನ್ನು ಮಾಗಿ ನೀವು ಸುಧಾರಿಸುವುದರಲ್ಲಿ ಯಶಸ್ವಿ ಗಬಲ್ಲಿರಿ ಅದರೆ ಹಾಗೆ ಮಾಡದೆ ನೀವು ದು ಪ್ರಾಥಮಿಕ ಶಾಲೆಯನ್ನಾಗಲಿ ಸಾಮಾ ಕ ಯೋಗಕ್ಷೇಮ ಕೇಂದ್ರವನ್ನಾಗಲಿ ಸ್ಥಾಪಿ ದರಲ್ಲಿ ಹಣವನ್ನು ಖರ್ಚು ಮಾಡಿದರೆ ಾಗಿಯೂ ಆದ ಉಸುಕಿನ ಮೇಲೆ ದ ಕಟ್ಟಿದಡಂತೆ ಅಭದ್ರವಾಗುವುದೇ ಸರಿ. ಇದ್ದಾಗ ಹಳ್ಳಿಗರು ಅದರ ಪ್ರಯೋಜ ನ್ನ ಪಡೆಯುವರು, ಅದು ಕೆಲಸ ನಿಲ್ಲಿಸಿ

ದೊಡನೆಯೇ ಅವರು ತಮ್ಮ ಅಜ್ಞಾನನಿದ್ರೆ ಯಲ್ಲಿ ಪುನಃ ಬೀಳುವರು ಮತ್ತು ಸುಧಾರಣೆಯ ಯಾವ ಚಿನ್ಹವೂ ಗೋಚರಕ್ಕೆ ಬರದು. ಸಮಸ್ಯೆಯ ಈ ಮುಖ ಗಾಂಧಿಯವರಿಗೆ ತಿಳಿದಿತ್ತು; ಅದರಿಂದಲೇ ಅವರು ಹಳ್ಳಿಗಳಲ್ಲಿ ಆಶ್ರಮಗಳನ್ನು ಸ್ಥಾಪಿಸಿದರೆ ಇಡಿ ದಿನವೂ ಅಲ್ಲೇ ಇದ್ದು ಹಳ್ಳಿಗರೊಡನೆ ಬೆರೆತು ಕೆಲಸ ಮಾಡಿ ಅವರ ನಿತ್ಯಜೀವನದಲ್ಲಿ ಭಾಗವಹಿಸಿ ಸ್ವಾವಲಂಬನದ ಅಭ್ಯಾಸಗಳನ್ನು ಅವರಲ್ಲಿ ಬೆಳೆಸಬಹುದು ಎಂದು ಒತ್ತಿ ಹೇಳಿದರು.

ಇವರ ಮೇಲೆ ಹಳ್ಳಿಯ ನಿರ್ಮಲೀಕರಣ ಮುಂತಾದ ಕೆಲ ಕೆಲಸಗಳನ್ನು ಹಳ್ಳಿಗರಿಗಾಗಿ ಆಶ್ರಮವಾಸಿಗಳು ಅಥವಾ ಸಾಮಾಜಿಕ ಯೋಗಕ್ಷೇಮ ಕೇಂದ್ರದವರು ಮಾಡಿದರೆ ಸಾಲದು; ಅವಶ್ಯವಾದುದೆಂದರೆ, ಸ್ವತಃ ಹಳ್ಳಿಗರನ್ನೇ ಸುಧಾರಕಬುದ್ಧಿಯುವರನ್ನಾಗಿ ಮಾಡುವುದು. ತರುಣ ತರುಣಿಯರನ್ನು ಸಂಘಟಿಸಿ ತಾವೇ ತಂತಮ್ಮ ಕಾರ್ಯಗಳನ್ನು ಮಾಡುವುದರಲ್ಲಿ ಶಿಕ್ಷಣಕೊಟ್ಟು ನೆರವೀಯಬೇಕು. ಕಾರ್ಯಕರ್ತರು ಸ್ವತಃ ಹೋಗಿ ಹಳ್ಳಿಗರ ಸಹಾಯ ಮತ್ತು ಕಾರ್ಯರೂಪದ ಸಹಕಾರಗಳಿಂದ ಸುಧಾರಣೆಯ ಬೀಜವನ್ನು ಬಿತ್ತಿ, ಆ ಬೀಜವು ಕೆಲ ವರ್ಷಗಳಲ್ಲೇ ಒಳ್ಳೆಯ, ಸುದೃಢವಾದ ಮರವಾಗಿ ಹೊರಗಿನ ನೆರವಿಲ್ಲದೆ ತಾನೇ ತಾನಾಗಿ ಬೆಳೆಯುತ್ತ ಹೋಗುವಂತೆ ಮಾಡಬೇಕು. ಒಬ್ಬ ನಗರಸ್ಥನನ್ನು ಹಳ್ಳಿಗೆ ಹೋಗಿ ಹಳ್ಳಿಗರೊಡನೆ ಬಾಳೆಂಬುದು ಒಂದು ಅಷ್ಟ ವಹಾರ್ಯವಾದಪೂರ್ಣಬೋಧಾವ್ಯುತವೆನಿಸೀತೆಂಬುದನ್ನು ನಾನು ಒಪ್ಪುತ್ತೇನೆ. ಅತ್ಯಲ್ಪ ಜನರಿಗೆ ಅದು ಸಾಧ್ಯ ಮತ್ತು ಎಲ್ಲರಿಗೂ ಹಾಗೆ ಮಾಡಿರೆನ್ನುವುದು ವ್ಯರ್ಥವಾದೀತು. ಆದರೆ ಒಬ್ಬರಿಗೆ ಮಾಡಲು ಸಾಧ್ಯವಾಗದುದನ್ನು ಒಟ್ಟಾಗಿ ಹಲವರು ಸಾಮೂಹಿಕ ರೀತಿಯಿಂದ ಮಾಡಬಲ್ಲರು. ಆದುದರಿಂದ ಗ್ರಾಮೋದ್ಧಾರದಲ್ಲಿ ಆಸಕ್ತಿಯುಳ್ಳ ರೋಟರಿ ಕ್ಲಬ್ಬಿನ ಕೆಲ ಜನರು ಸೇರಿ ಯಾವುದಾದರೊಂದು ಅಂಥಹಲ ಅಯ್ದು ಹಳ್ಳಿಗಳಲ್ಲಿ ತಮ್ಮದೊಂದು ಕುಟೀರವನ್ನು ಸ್ಥಾಪಿಸಿಕೊಳ್ಳಬೇಕು. ಆ ಮನೆಯಲ್ಲಿ ಯಾವಾಗಲೂ ಜನವಸತಿಯಿರಬೇಕು ಮತ್ತು ತಮ್ಮ ಹಳ್ಳಿಗೆ ಹೊಸದೊಂದು ಕುಟುಂಬ ಬಂದು ವಾಸಿಸತೊಡಗಿದೆ ಎಂದು ಅವರಿಗೆ ತೋರುವಂತಾಗಬೇಕು. ಸಾಧ್ಯವಿದ್ದಷ್ಟು ಜನರು ಕ್ಲಬ್ಬಿನಿಂದ ಹೋಗಿ ಅಲ್ಲಿ ಹಗಲು ರಾತ್ರಿಯೆನ್ನದೆ ಎಡೆಬಿಡದೆ ಇರಬೇಕು; ಕಡೆಯ ಪಕ್ಷ ಒಂದು ವ್ಯಕ್ತಿಯಾದರೂ ಅಲ್ಲಿ ವರ್ಷದಾದ್ಯಂತ ವಾಸವಾಗಿರಬೇಕು; ಮತ್ತೊಂದು ವರ್ಷ ಮತ್ತೊಂದಿರಬಹುದು. ಒಂದು ಗುಂಪಿನಲ್ಲಿ ೧೪ ಜನರಿದ್ದಾರೆನ್ನೋಣ; ಅವರು ತಮ್ಮೊಳಗೆ ತಂತಮ್ಮ ಸರತಿಯನ್ನು ನಿರ್ಣಯಿಸಿಕೊಳ್ಳಬಹುದು. ಪ್ರತಿ ಪಕ್ಷಕ್ಕೊಬ್ಬರಂತೆ ಅವರಲ್ಲಿ ಒಬ್ಬೊಬ್ಬರೂ ಒಂದೊಂದು ದಿನವನ್ನು ಹಳ್ಳಿಯ ಆಶ್ರಮದಲ್ಲಿದ್ದು ಕಳೆಯಬಹುದು. ಅದು ಹಳ್ಳಿಯಲ್ಲಿರುವ ಮತ್ತೊಂದು ಮನೆಯಂತೆಯೇ ಇರಬೇಕು; ಹೆಚ್ಚು ಶ್ರೀಮಂತಿಕೆಯನ್ನು ಮೆರೆಸುತ್ತಲೂ ಇರಬಾರದು, ವಿಲಕ್ಷಣವಾಗಿಯೂ ಇರಕೂಡದು. ಸಾದಾತರದ್ದಾಗಿರಬೇಕು. ಅದು ಸ್ವಚ್ಛತೆ, ಆರೋಗ್ಯ ಮತ್ತು ಶೌಚವ್ಯವಸ್ಥೆಗಳಿಗೆ ಒಂದು ಮಾದರಿಯಾಗಿರಬೇಕು. ಅದಕ್ಕೊಂದು ಸಣ್ಣ ಅಂಗಳವಿರಬೇಕು, ಅದರಲ್ಲಿ ಕುಡಿಯುವ ನೀರಿನ ಒಂದು ಬಾವಿಯಿರಬೇಕು; ಅತ್ತಿತ್ತ ಹೂಗಿಡಗಳಿರಬೇಕು—ಹಾಗಿದ್ದರೆ ಹಳ್ಳಿಗರು ಬಂದು ಕ್ಲಬ್ಬಿನ ಕೌಟುಂಬಿಕರೊಡನೆ ಆಗೀಗ ಒಂದು ಕುಳಿತು ಸುಖ ಸಂಕಥಾವಿನೋದದಲ್ಲಿ ಕಾಲ ಕಳೆಯಲು ಅನುಕೂಲವಾಗುತ್ತದೆ. ಆಶ್ರಮವಾಸಿಗಳೆಲ್ಲರೂ ಆ ಹಳ್ಳಿಯ ಒಂದೇ ಕುಟುಂಬಕ್ಕೆ ಸೇರಿದವರಂತೆ ವರ್ತಿಸಬೇಕು ಮತ್ತು ಹಳ್ಳಿಯ ಹಬ್ಬಹುಣ್ಣಿವೆ, ಸಂತೆ ಜಾತ್ರೆ ಮುಂತಾದ ಎಲ್ಲ ಚಟುವಟಿಕೆಗಳಲ್ಲೂ ಭಾಗವಹಿಸಬೇಕು. ಹಳ್ಳಿಗರ ಸುಖದುಃಖಗಳಲ್ಲಿ ಪಾಲುಗಾರರಾಗಬೇಕು. ಒಂದು ಔಷಧದ ಪೆಟ್ಟಿಗೆಯನ್ನಿಟ್ಟುಕೊಂಡು ಗೃಹವೈದ್ಯದ ಔಷಧಗಳನ್ನು ಆಶ್ರಮವಾಸಿಗಳು ಹಂಚಬಹುದು.

ಸ್ತ್ರೀವಿದ್ಯಾರ್ಥಕ್ಕಾಗಿ ಹಳ್ಳಿಗರನ್ನು ಸಂಘಟಿಸಬೇಕು. ಹಳ್ಳಿಗರಿಗೆ ಆ ಈ ವಿಷಯದ ಮೇಲೆ ಸಲಹೆ ಸೂಚನೆಗಳನ್ನು ಆಶ್ರಮಸ್ಥರು ಕೊಡಬೇಕು; ಕಾರ್ಯತಃ ಆಚರಿಸಲು ಹಳ್ಳಿಗರೇ ಮುಂದಾಗುವಂತೆ ನೋಡಿಕೊಳ್ಳಬೇಕು. ಈ ಕ್ರಮದಲ್ಲಿ ಅದ್ಭುತ ಸಿದ್ಧಿ ಸಾಧ್ಯವಾಗಬಹುದಾಗಿದೆ. ಶಿಕ್ಷವೂ ಕಾಲ ಕಾಲಕ್ಕೆ ಹಳ್ಳಿಯನ್ನು ಸ್ವಚ್ಛಗೊಳಿಸಲು ಒಂದು ಸುವ್ಯವಸ್ಥಿತ ದಲವನ್ನೇ ನಿರ್ಮಿಸಬಹುದು.

ಒಂದು ವೃತ್ತಿಕೇಂದ್ರವನ್ನು ಸ್ಥಾಪಿಸಬಹುದು, ಒಂದು ಒಳ್ಳೆಯ ಪ್ರಾಥಮಿಕ ಶಾಲೆಯನ್ನು ತೆರೆಯಬಹುದು, ಮನೆ ಕೈಗಾರಿಕೆಗಳನ್ನು ಪ್ರೋತ್ಸಾಹಿಸಬಹುದು ಮತ್ತು ಅವನ್ನು ಅಭಿವೃದ್ಧಿಗೊಳಿಸಬಹುದು.

ಆದರೆ ಆಶ್ರಮವಾಸಿಗಳು ಸಾಮಾನ್ಯ ಹಳ್ಳಿಗನ ಶುದ್ಧ ಜೀವನದಂಥದೇ ಜೀವನ ನಡೆಸುವಂತೆ ಎಚ್ಚರಿಕೆ ವಹಿಸಬೇಕು. ಆಹಾರ ಸರಳವಾಗಿರಬೇಕು ಮತ್ತು ಸರ್ವಥಾ ವಿಲಾಸದ್ರವ್ಯ ತಕ್ಕದ್ದಲ್ಲ. ಮನೆಯೊಳಗಿನ ಕೋಣೆಗಳಾಗಲಿ ಆಸನಾದಿ ಚಂದಿಗೆಗಳಾಗಲಿ ವೈಭವಯುಕ್ತವಾಗಿರಕೂಡದು. ಅವರ ಆಚರಣೆಯಲ್ಲಿ ಯಾವ ವಿಧದ ಉದ್ಧಾರಕತ್ವದ ಶ್ರೀಮದ್ಗಾಂಭೀರ್ಯವೂ ಕಾಣಿಸತಕ್ಕದ್ದಲ್ಲ. ಹಳ್ಳಿಗರಿಗೆ ಈ ಜನರು ಇಲ್ಲಿಯವರನ್ನು ಉದ್ಧಾರ ಮಾಡುವ ಹೆಮ್ಮೆಯಿಂದ ಬಂದು ನೆಲಸಿರದೆ ಹಳ್ಳಿಯ ಸರಳ ಸತ್ಯಸಂಧ ಜನರ ಸಂಪರ್ಕದಿಂದ ತಮ್ಮ ಜೀವನವನ್ನೇ ಉದಾತ್ತವಾಗಿ ಮಾಡಿಕೊಳ್ಳುವಬಯಕೆಯಿಂದ ಬಂದಿದ್ದಾರೆನಿಸಿರಬೇಕು. ಇದು ಬರಿ ಚರ್ವಿತ ಚರ್ವಣ ಉಪದೇಶವಲ್ಲ. ನಾನು ಹಳ್ಳಿಗೆ ಹೋದಾಗೆಲ್ಲ ನನಗೆ ದೊರೆಯುವ ಜ್ಞಾನಲಾಭದೆದುರಿಗೆ ಹಳ್ಳಿಗರಿಗೆ ನನ್ನಿಂದ ದೊರೆಯುವ ಪ್ರಯೋಜನ ಕ್ಷುಪದಾರ್ಥವಾಗಿವೆಯೆಂದು ನನ್ನ ಅನುಭವಕ್ಕೆ ಎಷ್ಟೋ ವೇಳೆ ಬಂದಿದೆ.

ಈ ಮಾದರಿಯಲ್ಲಿ ಕೆಲಸ ಮಾಡಿದರೆ ಅದರಿಂದ ವ್ಯಾಪಕವಾದ ಪರಿಣಾಮವಾಗುವಲ್ಲಿ ಸಂದೇಹವಿಲ್ಲ. ಹೀಗೆ ಸ್ಥಾಪಿಸಿದ ಆಶ್ರಮವು ಹಳ್ಳಿಯಲ್ಲಿ ಉಳಿದೆಲ್ಲ ಮನೆಗಳಿಗೆ ಆದರ್ಶಪ್ರಾಯವಾಗುವದು. ಹಳ್ಳಿಗರು ತಮ್ಮ ಸುಧಾರಣೆ ಮಾಡಿಕೊಳ್ಳಲು ತಾವಾಗಿಯೇ ಕಲಿತುಕೊಳ್ಳುವರು. ಇದಕ್ಕೆ ಹಣವೇನೋ ಖಂಡಿತ ಬೇಕಾದೀತು. ಆದರೆ.... ಈ ಹಣವನ್ನು ದುಂದುಮಾಡಕೂಡದು. ಅದು ಪುರುಷ ಪ್ರಯತ್ನದಿಂದ ಕೂಡಿರಬೇಕಲ್ಲದೆ ಸ್ವಂತ ಮೇಲ್ಪಂತಿಯನ್ನೊಡಗೊಂಡಿರಬೇಕು. ಹಾಗಾದರೇನೆ ಅದು ಅತ್ಯಂತ ಫಲಕಾರಿಯಾಗುವದು.

.ಕೈಲಾಸನಾಥ ಕಟಜು

(ಕಲಕತ್ತೆ ಮತ್ತು ಹೌರ ರೋಟರಿ ಕ್ಲಬ್ಬುಗಳಿಗೆ ಕಳಿಸಿದ ಸೂಚನೆಯಿಂದ)

## ಆಹಾರ, ನಿಯಂತ್ರಣಗಳಲ್ಲಿ ಸ್ಪರ್ಧೆ

ಪಂಡಿತರಿಂದ ಪಾಮರರ ವರೆಗಿನ ಜನರಿಂದ ನನಗೆ ಬರುತ್ತಿರುವ ಪತ್ರಗಳ ಮೇಲಿಂದ ಹೇಳುವುದಾದರೆ, ಗವರ್ನರ್ ಜನರಲ್ಲರೂ ಮುಖ್ಯ ಮಂತ್ರಿಗಳೂ ಸರಕಾರೀ ವಕ್ತಾರರೂ ಹೆಚ್ಚು ಬೆಳೆಯಲು ಮತ್ತು ಕಡಿಮೆ ತಿನ್ನಲು ಬಿನ್ನಹಮಾಡಿಕೊಂಡಂದಿನಿಂದ ಆಹಾರಕ್ಕೂ ನಿಯಂತ್ರಣಕ್ಕೂ ಪರಸ್ಪರವಾಗಿ ಒಂದು ಸ್ಪರ್ಧೆಯೆದ್ದಂತಿದೆ. ಮೊದಲೂ ಹೀಗೇ ಆಗಿತ್ತು. ಜನತೆ ನಿಯಂತ್ರಣದ ಬಗ್ಗೆ ಮಾಡುವ ಪ್ರತಿಭಟನೆಯ ಓಜಸ್ಸು ಸರಕಾರದ ಬಿನ್ನಹದ ಓಜಸ್ಸಿಗೆ ಸರಿದೊರೆಯಾಗಿ ಭಿನ್ನ ಭಿನ್ನ ಪ್ರಮಾಣಗಳಲ್ಲಿ ಹರಿಯುತ್ತಿದೆ.

ಜನತೆಯ ಬೇಡಿಕೆಗಳಿಗೆ ಸರಕಾರ ಒಪ್ಪಿಗೆ ಕೊಡದೆ ಉಳಿಯಲಾರದು. ನಿಯಂತ್ರಣದ ದುಷ್ಪರಿಣಾಮಗಳು ಸ್ವತಃಸಿದ್ಧವಾಗಿವೆ; ಅದರಿಂದಾದ ಒಳ್ಳೆಯ ಕಾರ್ಯವೇನಾದರೂ ಆಗಿದ್ದರೆ ಅದು ಅಗೋಚರವಾಗಿದೆ. ಈ ನಿಯಂತ್ರಣವಿಂದು ಪಂಡಿತ ನೆಹರು ಹಿಂದಿನ ಸರಕಾರದ ಅದಳತೆಯನ್ನು ಬಯ್ಯಲು ಯಾವ ವಿಶೇಷಣಪದಗಳನ್ನು ಬಳಸುತ್ತಿದ್ದರೋ ಅವನ್ನೇ ಸದ್ಯದ ಅದಳತೆಯನ್ನು ದೂರಲು ಬಳಸುವಂತೆ ಪ್ರೇರಿಸಿದೆ.

ವರ್ಧಾ, ೨೮.೭.೪೯ — ಕಿ. ಘ. ಮ.

(೧೩ ನೆಯ ಪುಟದಿಂದ)

ಹೆಚ್ಚುತಿದೆ ಎಂದು ಎಲ್ಲ ಕಡೆಯಿಂದ ತಿಳಿದು ಬರುತ್ತದೆ. ಕೆಲ ಮಂತ್ರಿಗಳು, ಶಾಸನಸಭಾ ಸದಸ್ಯರು ಮತ್ತು ಕಾಂಗ್ರೆಸ ಧುರೀಣರ ಹೆಸರುಗಳು ಕೂಡ ಕುದುಕರ ಮಾಲಿಕೆಯಲ್ಲಿ ಎಳೆಯಲ್ಪಡುತಿವೆ. ಧೋರಣದಲ್ಲಾದ ಈ ಬದಲಾವಣೆಯು ಇದಕ್ಕೆ ಸಾಕ್ಷಿಯೆಂದು ತೋರುತ್ತದೆ. ಜೀವನಮಟ್ಟವನ್ನು ಎತ್ತರಿಸಬೇಕೆಂಬ ಸರಕಾರದ ಧ್ಯೇಯವು ದುರ್ವ್ಯಸನ ಮಟ್ಟವನ್ನು ಎತ್ತರಿಸುವದರಲ್ಲಿ ರೂಪಾಂತರ ಹೊಂದಿದೆಂದು ನಾನು ಇದರಿಂದ ಅರ್ಥ ಮಾಡಿಕೊಳ್ಳಬೇಕೋ?

ವರ್ಧಾ ೨೫.೭.೪೯ ಕಿ. ಘ. ಮಶ್ರೂವಾಲಾ

## ವ್ಯಾಪಾರಲೋಕ

### ಮುಂಬಯಿ ಶೇರಪೇಟೆ

| | ತಾ. ೩ |
|---|---|
| ಮುಂಬಯಿ ಡಾಯಿಂಗ್ | ೧೦೬೩-೧೨-೦ |
| ಕೋಹಿನೂರು | ೩೫೨-೦-೦ |
| ಸ್ವದೇಶಿ | ೩೮೪-೮-೦ |
| ಗೋಕಾಕ | ೩೪೯-೦-೦ |
| ಸೆಂಚುರಿ | ೨೦೫-೦-೦ |
| ಸಿಂಪ್ಲೆಕ್ಸ | ೧೬೦-೦-೦ |
| ಟಾಟಾ ಸ್ಟೀಲ ಡೆಫರ್ಡ | ೧೩೪೧-೮-೦ |
| ಇಂಡಿಯನ್ ಅಯರ್ನ | ೨೨-೮-೦ |
| ಅಸೋ. ಸಿಮೆಂಟ್ಸ | ೧೪೩-೧೨-೦ |
| ಸೆಂಟ್ರಲ ಬ್ಯಾಂಕ್ | ೭೭-೮-೦ |
| ಇಂಪೀರಿಯಲ್ (ಪೂರ್ಣ) | ೧೭೪೫.೦.೦ |

### ಚಿನ್ನ ಬೆಳ್ಳಿ

| | ತಾ. ೪ |
|---|---|
| ತಯಾರಿ ಬೆಳ್ಳಿ | ೧೬೨-೦-೦ |
| ತಯಾರಿ ಚಿನ್ನ | ೧೧೪-೦-೦ |
| ಸಾವರಿನ | ೭೩-೧೨-೦ |

### ಅರಳೆ

| | |
|---|---|
| ಸೆಪ್ಟೆಂಬರ | ೬೨೪.೦.೦ |

### ಎಣ್ಣೆಕಾಳು

| | |
|---|---|
| ಶೇಂಗಾ | ೨೦೭-೪-೦ |
| ಅಗಸೆ (ತಯಾರಿ) | ೨೯-೧೫.೦ |
| ಅಗಸೆ ಎಣ್ಣೆ | ೧೮.೪.೬ |
| ಔಡಲ | ೨೭.೮.೦ |

### ಸಾಂಗಲಿ ಪೇಟೆ

| | ತಾ. ೩ |
|---|---|
| ಅರಿಸಿಣ(ಹೇರು) | ೧೦೮.೧೧೧ |
| ಮೆಣಸಿನಕಾಯಿ(ಹೇರು) | ೧೫೦.೧೯೦ |
| ಶೇಂಗಾ(ಖಂಡಿ) | ೧೫೫.೮.೦ |
| ಬೆಲ್ಲ(ಹೇರು) | ೭೨.೭೫ |

### ಶಿವಮೊಗ್ಗೆ ಅಡಿಕೆ ಪೇಟೆ

| | ತಾ. ೩ |
|---|---|
| ದೇಶಾವರ ನಂ. ೧ (ಮಣಕ್ಕೆ) | ೨೯-೩೨ |
| ,, ೨ | ೨೭-೩೦ |
| ರಾಶಾ ಅಲವು | ೨೬-೨೯ |
| ಕೊಠಸಾಲು | ೨೬-೨೯ |
| ಬೆಟ್ಟೆವಂತ | ೨೪-೨೯ |
| ಬೆಟ್ಟೆ | ೧೫-೧೬ |

### ಹುಬ್ಬಳ್ಳಿ

( ಅ. ಪ್ರ. ಮಾರ್ಕೆಟ ಕಮೀಟಿ ಹುಬ್ಬಳ್ಳಿ )

| | | ತಾ. ೪ | |
|---|---|---|---|
| ಜಪೊ.ಹತ್ತಿ (ನಗಕ್ಕೆ) | | ೪೫೦ ರಿಂದ ೪೯೦-೦-೦ | |
| ಅಫ್ಲಂಡ ಹತ್ತಿ | ,, | ವ್ಯಾಪಾರ ನಡೆಯಲಿಲ್ಲ. | |
| ಜೇನ್ ಅರಳೆ | ,, | ೩೩೫-೦-೦ | ೩೪೨-೦-೦ |
| ಡಬಲ್ ರೋಲ್ ಅರಳೆ | | ೩೦೦-೦-೦ | ೩೦೨-೦-೦ |
| ಕುಸುಬಿ (ಬ. ಮಣಕ್ಕೆ) | | ೧೫-೦-೦ | ೧೫-೩-೦ |
| ಅಗಸಿ (ಚೀಲಕ್ಕೆ) | | ೪೩-೦-೦ | ೪೪-೦-೦ |
| ಔಡಲ | ,, | ೩೪-೦-೦ | ೩೬-೦-೦ |
| ಜ. ಹೆಸರು | ,, | ೪೨-೦-೦ | ೪೪-೦-೦ |
| ಕರಿ ಎಳ್ಳು | ,, | | ೬೪-೦-೦ |
| ಬಿಳಿ ಎಳ್ಳು | ,, | ೮೫-೮. | ೯೨-೦-೦ |
| ಕಡಲೆ | ,, | ೫೨-೦-೦ | ೫೩-೦-೦ |
| ಉದ್ದು | ,, | ೩೯-೦-೦ | ೪೨-೧೦-೮ |
| ಜ. ತೊಗರಿ | ,, | ೨೬-೦-೦ | ೩೮-೦-೦ |
| ಹುರಳಿ | ,, | ೩೩-೦-೦ | ೩೪-೦-೦ |
| ಕೆಂ. ಅಲಸಂದಿ | ,, | ೫೨-೦-೦ | ೫೪-೦-೦ |
| ಬಿ. ಅಲಸಂದಿ | ,, | — | ೫೬-೧೪-೨ |
| ಬೆಲ್ಲ (ಹೇರಿಗೆ ೮ ಮಣ) | | ೬೦-೦-೦ | ೬೨-೦-೦ |
| ಶೇಂಗಾ (ಹೇರು) | | ೪೮-೦-೦ | ೫೮-೦-೦ |
| ಶೇಂಗಾ ಕಾಳು | | ೮೦-೦-೦ | ೮೪-೦-೦ |

## ಶ್ರೀ ರಾಯರ ಬಣ್ಣದ ಚಿತ್ರ

ಹುಬ್ಬಳ್ಳಿಯ ಪ್ರಸಿದ್ಧ ಫೋಟೋಗ್ರಾಫರರಾಗಿರುವ ಶ್ರೀ ಆದವಾನಿಯವರು ಶ್ರೀ ರಾಘವೇಂದ್ರಸ್ವಾಮಿಗಳ ವೃಂದಾವನದ ಮೂಬಣ್ಣಗಳ ಸುಂದರ ಚಿತ್ರವನ್ನು ಪ್ರಸಿದ್ಧಿಸಿದ್ದು ಮಂತ್ರಾಲಯದಲ್ಲಿ ಆರಾಧನಾಮಹೋತ್ಸವದ ಕಾಲಕ್ಕೆ ಮಾರಲಿಕ್ಕೆ ಸಿಕ್ಕುವವು.

## ನದಿಯಲ್ಲಿ ಮುಳುಗಿ ಇಬ್ಬರ ಮರಣ

ಶ್ರೀ ಚಂದ್ರಕಾಂತ ಸುತಾರಿಯಾ ಎಂಬ ಮುಂಬೈ ಪತ್ರಿಕೋದ್ಯೋಗಿಗಳು ಹಾಗು ಅವರು ತಮ್ಮ ಧನಸುಖಲಾಲರು ಉಜ್ಜಯಿನಿಯಲ್ಲಿ ನದಿಯಲ್ಲಿ ಸ್ನಾನ ಮಾಡುತಿದ್ದಾಗ ಮುಳುಗಿ ಸತ್ತರೆಂದು ತಂತಿ ಬಂದಿದೆ.

ಹರಟೆ

# ಕಾಫೀ—ವಿಜ್ಞಾನಿ

ಪ್ರೊ. ನಾ. ಕಸ್ತೂರಿ, ಎಂ, ಎ; ಬಿ. ಎಲ್.

ಮೊನ್ನೆ ನಾನು ಪೇಟೆಯಿಂದ ಅರ್ಧ ಪೌಂಡು ಕಾಫಿಪುಡಿ ತೆಗೆದುಕೊಂಡು, ಬಸ್ಸಿಗಾಗಿ ಕಾದು ನಿಂತಿದ್ದೆ. ಅಲ್ಲೇ ಪರದಾಡುತ್ತಿದ್ದ ಇಳಿವಯಸ್ಸಿನ ನಾಗರಿಕರೊಬ್ಬರು? "ಸ್ವಾಮಿ! ಕೊಂಚ ನನ್ನ ಕೈಗೆ ಕೊಡುತ್ತೀರಾ, ಆ ಪ್ಯಾಕೆಟ್ಟನ್ನ?" ಎಂದರು. ನಾನು ಬೆರಗಾದೆ. ಏನೂ ಉತ್ತರ ಕೊಡಲಿಲ್ಲ. ಆದರೆ, ಅಷ್ಟರಲ್ಲಿ ಅವರೇ ಹತ್ತಿರ ಬಂದು, ನನ್ನ ಕೈಯಿಂದ ಪೊಟ್ಟಣವನ್ನು ಕಿತ್ತು, ತಮ್ಮ ಮೂಗಿಗೆ ಹಿಡಿದುಕೊಂಡು ಉಸಿರೆಳೆದು ಮೂಸಿದರು; ಮೂಸುತ್ತಲೇ ಇದ್ದರು. ನನಗೆ ಆಶ್ಚರ್ಯವಾಯಿತು. ಕೇವಲ ಅಪರಿಚಿತ ವ್ಯಕ್ತಿ; ಏಕೆ ಹೀಗೆ ಪುಡಿ ಮೂಸುತ್ತಿದ್ದಾನೆ, ಎಂಬುದು ಅರ್ಥವಾಗಲಿಲ್ಲ.

ಅವರೇ ಮಾತಿಗೆ ಮೊದಲು ಮಾಡಿದರು. "ದಿಗಿಲಾಗಬೇಡಿ! ಕಾಫಿವಾಸನೆ ಎಂದರೆ ನನಗೆ ಒಂದು ರೀತಿಯ ಹುಚ್ಚು! ಕಾಫಿಯೇ ನನ್ನನ್ನು ಸ್ವರ್ಗಕ್ಕೊ ನರಕಕ್ಕೊ ಎಳೆದೊಯ್ಯುತ್ತಿರುವ ಮಾಟದ ಮೋಹಿನಿ... ಬನ್ನಿ! ಬಸ್ಸು ಬಂತು. ಕೂತುಕೊಳ್ಳೋಣ.... ನನ್ನ ಕಾಫೀ ಕಾಮವಿಲಾಸದ ಕತೆ ಹೇಳುತ್ತೇನೆ... ಪೊಟ್ಟಣವನ್ನ ಆ ಮೇಲೆ ಕೊಡುತ್ತೇನೆ.. ಪರಿಮಳ ತುಂಬಾ ಚೆನ್ನಾಗಿದೆ..." ಎಂದರು. ಇಬ್ಬರೂ ಅಕ್ಕಪಕ್ಕದಲ್ಲೇ ಕುಳಿತೆವು.

"ನನ್ನ ಇಪ್ಪತ್ತೆರಡನೆಯ ವಯಸ್ಸಿನವರೆಗೂ ನಾನು ಈ ಕಷಾಯವನ್ನು ನಾಲಿಗೆಗೆ ಸೋಕಿಸಿರಲಿಲ್ಲ. ಬಡತನವೇ ಮುಖ್ಯ ಕಾರಣ; ಅಭಾವ ವೈರಾಗ್ಯ. ಆ ವರ್ಷ ನನಗೆ ಸರ್ಕಾರಿ ನೌಕರಿ ದೊರೆಯಿತು; ಹೊಸ ಹೆಂಡತಿ; ಹೊಸ ಸಂಸಾರ. ಕಾಫಿ ಮೊದಮೊದಲು ಅವಳು ಕಾಯಿಸಿ ಇಳಿಸಿ ಇಂಗಿಸಿದ ದ್ರಾವಕವನ್ನೇ ಸುಧೆ ಎಂದು ಭಾವಿಸಿ ಕುಡಿಯುತ್ತಿದ್ದೆ. ಆದರೆ, ಒಂದೆರಡು ವರ್ಷಗಳಲ್ಲೇ ಅವಳ ಕೈವಾಡದಲ್ಲಿ ಬೇಸರಿಕೆ ಹುಟ್ಟಿತು. ಅವಳು ಮಾಡಿದ ಕಷಾಯದಲ್ಲಿ ಕಹಿ ಕಾಣಿಸಿತು. ಅದರ ವಿಷಯವನ್ನು ಗೆಳೆಯರಲ್ಲಿ ಚರ್ಚಿಸಿದೆ. ಅತೀ ಉತ್ತಮ ಕಾಫಿಯನ್ನು ತಯಾರಿಸುವುದು ಹೇಗೆ ಎಂದು ಅನೇಕರನ್ನು ವಿಚಾರಿಸಿದೆ. ಕಾಫಿ ಭಕ್ತರನ್ನೆಲ್ಲ ಕಾಡಿದೆ; ಕಾಫೀ ಸಾಹಿತ್ಯವನ್ನೆಲ್ಲ ಓದಿದೆ. ಹೋಟೆಲುಗಳಿಗೆಲ್ಲ ಭೇಟಿಕೊಟ್ಟು, ಶುದ್ಧ ಕಾಫಿಯ ಸೊಬಗನ್ನು ಸಂಪೂರ್ಣವಾಗಿ ಸಾವಧಾನವಾಗಿ ಕಳಂಕವಿಲ್ಲದೆ ಸವಿಯಲು ಯಾವ ವಿಧಾನದಲ್ಲಿ ಅದನ್ನು ತಯಾರಿಸಬೇಕೆಂಬುದನ್ನು ಕಲಿತೆ.

ನೀವೇನೋ ಇವತ್ತು ಯಾವುದೋ ಒಂದು ಅಂಗಡಿಗೆ ನುಗ್ಗಿ, ಅತ ಕೊಟ್ಟ ಪೊಟ್ಟಣವತ್ತಿ ತಂದಿರಿ! ನಾನು ಹಾಗಲ್ಲ.. ನೋಡಿ! ಅರಬಿಕವಾಗಲಿ ರೊಬಸ್ಟವಾಗಲಿ ಬೀಜದ ಗುಣ ಕ್ಷೇತ್ರದ ಮೇಲೆ ಹೋಗುತ್ತೆ. ಮಣ್ಣು ಹಾಗೂ ಕಣ್ಣು—ವೈ ಎಲ್ಲ ಕಣ್ಣಾಗಿ ಪೋಷಿಸಬೇಕು. ಸಾಕಷ್ಟು ಮಳೆ, ಬೇಕಷ್ಟು ಬಿಸಿಲು, ಕಾಣಿಸಬೇಕು. ಅದ್ದರಿಂದಲೇ ನಾನು ಶ್ರೀಮಂತ್ ಬಾಬಾ ಬುಡನ್ ಬೆಟ್ಟದಿಂದಲೇ ಬೀಜ ತರಿಸಿದೆ. ಅದನ್ನ ಹೊಚ್ಚಹೊಸ ಬಿಳಿಯ ಅರಿವೆಯಲ್ಲಿ ಹರಡಿದೆ. ಮಿಡಿ, ಪುಡಿ, ಕಸ, ಕಡ್ಡಿಗಳನ್ನು ನಾನೇ ತೆಗೆದು ಆಚೆಗೆಸೆದೆ. ನಾಲ್ಕು ದಿನ ಬಿಸಿಲಿಗೆ ತೋರಿಸಿ, ಆ ಮೇಲೆ, ಎರಡು ದಿನ ಕುಕ್ಕೆಯಲ್ಲಿಟ್ಟು ಕತ್ತಲೆ ಕೋಣೆಯೊಳಗಿರಿಸಿದೆ. ಏಳನೆಯ ದಿನ, ಬೇಗ್ಗೆ, ಬೆಳಕಿಗೆ ಅದನ್ನು ಹಿಡಿದರೆ, ಆ ಹ ಹ! ಅದರ ಹೊಳಪು, ಅದರ ಪರಿಮಳ,... ನಾಲಗೆಯಲ್ಲಿ ನೀರು! ಕ್ಷಮಿಸಿ!

ಹೀಗೆಯೇ ಮಾಡಬೇಕು, ಎಂದು ಒಂದು ಗ್ರಂಥದಲ್ಲಿತ್ತು. ಆದರೆ, ನಾನು ನನ್ನ ಸ್ವಂತ ಸಂಶೋಧನೆಯಿಂದ ಅನೇಕ ಹೊಸ ಪ್ರಯೋಗಗಳನ್ನು ಪತ್ತೆ ಹಚ್ಚಿದೆ, ಎನ್ನಿ. ಬಿಳಿ ಬಟ್ಟೆಗಿಂತ, ನೀಲಿ ಬಣ್ಣದ್ದನ್ನು ತಂದು. ಅದರ ಮೇಲೆ ಬೀಜವನ್ನು ಬಿಸಿಲಿಗೆ ಹರಡಿದರೆ, ಅದರಿಂದಾದ ಪುಡಿ ಹಾಕಿ ತಯಾರಿಸಿದ ಕಷಾಯಕ್ಕೆ ತುಸ ಖಾರ ಕಡಮೆ ಎಂದು ನಾನು ಅರಿತೆ. ಇಷ್ಟಾದ ಮೇಲೆ, ಬೀಜವನ್ನು ಹುರಿಯಬೇಡವೆ? ಅದಕ್ಕೆ, ಬಾಣಲಿ ಗೀಣಲಿ ಕೂಡದು. ಬುಡನ್‌ಬಾಬನ ಕಾಲದಲ್ಲಿ ಬಾಣಲಿ ಇತ್ತೆ? ಇಲ್ಲ. ಪಿಂಗಾಣಿ ಪಾತ್ರೆ ಉತ್ತಮ ಎಂದು ಡಾ॥ ಗ್ರೀನ್ ಬರೆಯುತ್ತಾರೆ. ಆದರೆ, ಅವರು ಬ್ರೆಜಿಲ್ ದೇಶದವರು, ಆ ಊರಿನ ಕಾಫಿಗೆ ಅದು ಸರಿ ಹೋಗಬಹುದೋ ಏನೋ? ನಮ್ಮ ದೇಶದ ಕಾಫಿಗೆ ನನ್ನ ಅನುಭವದಲ್ಲಿ ಮಣ್ಣಿನ ಮಡಕೆಯೇ ಸರಿ. ಕೆಮ್ಮಣ್ಣಿನದು; ಕಪ್ಪನೆಯದಲ್ಲ. ಕಬ್ಬಿಣದ ಕೊಳವೆಗಳಲ್ಲಿ ಹುರಿಯಬಹುದೆನ್ನುತ್ತಾರೆ, ಕೆಲವರು, ಕಾಫೀ ಶಾಸ್ತ್ರವನ್ನು ಅಭ್ಯಾಸ ಮಾಡದವರು. ಆದರೆ, ನನ್ನ ಅಭಿಪ್ರಾಯ ಹೇಳಲೋ? ನಾನು ಖಂಡಿತವಾದಿ. ಕಬ್ಬಿಣದ ಮಿಷಿನ್‌ಗಳಲ್ಲಿ ಹುರಿದ ಕಾಫಿಪುಡಿ ಹಾಕಿದ ದ್ರಾವಕವನ್ನು ಕುಡಿದ ಹತ್ತು ನಿಮಿಷಕ್ಕೆ ಬರುವ ಮೊದಲೆರಡು ತೇಗಿನಲ್ಲಿ ರವೆಯಷ್ಟು ದುರ್ವಾಸನೆ ಬೆರೆತಿರುತ್ತದೆ. ಅನುಮಾನವಿದ್ದರೆ, ಮುಂದಿನ ಬಾರಿ, ಲಾಲಿಸಿ? ಹುರಿದ ಬೀಜವನ್ನು ಕುಟ್ಟುವುದಕ್ಕೆ, ಕಬ್ಬಿಣದ ಒನಕೆಗಳಿಗಿಂತ, ಮರದ್ದೇ ಮೇಲು ಎಂಬುದೇ ನನ್ನ ಮತ; ಮರಗಳಲ್ಲಿ ಬೇವು, ಮತ್ತಿ, ಜಾಲಿ ಮಧ್ಯಮ, ಹಲಸು ಅಧಮ; ಮಿಕ್ಕೆಲ್ಲ ಉತ್ತಮ... ಏಕೆ? ನಗ್ತೀರೇಕೆ?

ಮರಳುವ ನೀರಲ್ಲಿ ಪುಡಿ ಹಾಕಬೇಕೊ, ಪುಡಿಯ ಮೇಲೆ ಮರಳುವ ನೀರನ್ನು ಸುರಿಯಬೇಕೊ, ಎಂಬುದು ಮುಂದಿನ ಪ್ರಶ್ನೆ. ಚಹವಾದರೆ, ಹೇಗೆಂದರೆ ಹಾಗೆ, ಅಂತ ಸುಮ್ಮನಿರಬಹುದು. ಆದರೆ, ನಮ್ಮ ಕಾಫೀ ಹಾಗಲ್ಲ. ನಾನು ಎರಡು ಪದ್ಧತಿಗಳನ್ನೂ ದಿನ ಬಿಟ್ಟು ದಿನ, ಆಚರಣೆ ಮಾಡಿ, ಕಡೆಗೆ, ಪುಡಿಯ ತಳಿಗೆ ನೀರು, ಎಂಬ ಕ್ರಮವೇ ಉತ್ತಮೋತ್ತಮ ಎಂದು ಇತ್ಯರ್ಥಮಾಡಿಕೊಂಡಿದ್ದೇನೆ. ಬೆಳ್ಳನೆಯ ಕಂಚಿನ ಬೋಗಣಿಯಲ್ಲಿ ಪುಡಿಯನ್ನು ಹರಡಿ, ನೀರು ಸುರಿದು, ತಕ್ಷಣ, ಮುಚ್ಚಳದಿಂದ ಪರಿಮಳದ ಹಬೆಯನ್ನು ಅದುಮಿ ಹಿಡಿಯಬೇಕು.

ಇನ್ನು ಹಾಲು! ಗೋಮಾತೆಯ ಹಾಲನ್ನೇ ನಾನು ಬಹಳ ವರ್ಷ ನೆಚ್ಚಿಕೊಂಡಿದ್ದೆ.. ಆದರೆ, ಒಮ್ಮೆ, ನಮ್ಮೂರು ಕಲೆಕ್ಟರ್ ಸಾಹೇಬರು 'ಎಮ್ಮೆ ಹಾಲಾದರೆ, "ಕಾಫೀ-ರಸಘಟ್ಟ" ಎಂದು ಹೇಳಿದರು. ನಾನು ಅಂದಿನಿಂದ ಎಮ್ಮೆ ಸಾಕುವುದಕ್ಕೆ ಪ್ರಾರಂಭ ಮಾಡಿದೆ. ಅದಕ್ಕೆ ತರತರದ ಹುಲ್ಲನ್ನು ತಿನ್ನಿಸಿ ಅದರ ಹಾಲಿನ ರುಚಿಯನ್ನು ತಿದ್ದಲು ಯತ್ನಿಸಿದೆ. ಬೆನ್ನಿಗೆ ಹರಳೆಣ್ಣೆ ಸವರಿದರೆ, ಹಾಲಿಗೆ ರುಚಿ ಹೆಚ್ಚು, ಎಂದು ಯಾರೋ ಹೇಳಿದ್ದರು. ಊಹುಂ! ಶುದ್ಧ ತಪ್ಪು.... ಬದಲಾಗಿ ಅಲಿವ್ ಆಯಿಲ್‌ನಲ್ಲಿ ಕರ್ಪೂರ ಬೆರೆಸಿ ಹಚ್ಚಿದರೆ ಮಾತ್ರ, ಆ ಹಾಲು ಕಾಫಿಗೆ ಅತ್ಯುತ್ತಮ ಎಂದು ಪತ್ತೆ ಆಯಿತು. ಅಲ್ಲದೆ, ದಿನವೂ ಮೂರು ಹೊತ್ತು ನಾಲ್ಕು ತುಲಸೀದಲ ತಿನ್ನಿಸಿದಾಗಂತೂ ಅದರ ಹಾಲಿನ ಹೊಳಪೇ ಬದಲಾಗಿ, ಸಲಗದ ದಂತದ ಬಣ್ಣ ಬರುತ್ತದೆ.

ನಗಬೇಡಿ, ಸ್ವಾಮಿ! ನನ್ನ ಆಸೆಯ ಅಧಿದೇವತೆ, ಕಾಫಿ. ಅದು ಹೊಟ್ಟೆಗೆ ಹೋಗಿ ಹೃದಯವನ್ನು ತಾಕಿ ತಳಮಳಿಸುವ ಜೀವರಸ. ಅದಕ್ಕಾಗಿ ಎಷ್ಟು ಹಣ ಎಷ್ಟು ಶ್ರಮ ವೆಚ್ಚವಾದರೂ ಕಡಮೆಯಲ್ಲವೆ? ಮೂರು ಚಮಚ ಪುಡಿ, ಮೂವತ್ತು ಚಮಚ ನೀರು... ಮೂವತ್ತು ಚಮಚ ಹಾಲು.. ಅದೇ ನಳಮಹಾರಾಜನ ಲೆಕ್ಕ. ಅರ್ಧ ಚಮಚ, ಸಕ್ಕರೆ... ಇದಿಷ್ಟೂ ಮಾಡಿ, ಬಿಸಿಬಿಸಿಯಾಗಿ ಬೆಳ್ಳಿಬಟ್ಟಲಿಗೆ ಬಟ್ಟಿಸುತ್ತಿ ಎತ್ತಿ ಹಿಡಿದು ತುಟಿ ಅಂಚಿಂದ ಹೀರಿ ನಿಧಾನವಾಗಿ ಕುಡಿದರೆ. . . . ."

ಎರಡು ನಿಮಿಷ ಮಾತೇ ನಿಂತು ಹೋಯಿತು. ಕಣ್ಣು ಮುಚ್ಚಿಕೊಂಡು, ಪೊಟ್ಟಣ ಮೂಸುತ್ತ, ಅವರು ಧ್ಯಾನಾಸಕ್ತರಾದರು. —

"ಈಗ, ಅದೆಲ್ಲ ಹಿಂದಿನ ಮಾತು! ಕನ್ನಡಿ ಗಂಟು! ಗಗನ ಕುಸುಮ! ಈಚೆಗೆ ಅಷ್ಟು ಅಜೋಕು ಸಾಧ್ಯವಾಗುತ್ತಿಲ್ಲ. ಸಿಕ್ಕಿದ ಪುಡಿ, ಸಿಕ್ಕಿದ ಹಾಲು; ಹಾಗ ನಡೆಸಿದೆ, ನಾಲ್ಕೈದು ವರ್ಷ. ವರಮಾನ ನರಮಾನ ಕಡಮೆಯಾಗ್ತಾ ಇದೆ, ದಿನದಿನಕ್ಕೂ, ಮಡದಿಮಕ್ಕಳಿಗೆ ತಾಳ್ಮೆ ಸಾಲದು; ವ್ಯವಧಾನವಿಲ್ಲ; ಹಿರಣ್ಯದ ಅಭಾವ.. ಸುಖಪಡಬಾರದು. ಸ್ವಾಮಿ, ಮನುಷ್ಯ; ಪಟ್ಟರೆ, ದುಃಖ, ಅದರ ಬೆನ್ನಲ್ಲೇ ಅವಿತು ಕುಳಿತಿರುತ್ತದೆ,.." ಎಂದು ಹೇಳುತ್ತ ಕಣ್ಣಲ್ಲಿ ನೀರು ತುಂಬಿಕೊಂಡರು. "ನಿಮ್ಮ ಈ ಪುಡಿ ಮೂಸಿದಾಗ, ಆ ಹಿಂದಿನ ಸವಿನೆನಪು ಮರಳಿ ನಾಲಿಗೆ ನೀರೂರಿತು; ಏನೇನೋ ಒದರಿದೆ.. ಈಗ. ಆ ನೆನಪೇ ನನಗೆ ಮುಡಿಪು, ಈ ಎರವಲು ವಾಸನೆಯೇ ನನ್ನ ಪುಣ್ಯನಿಧಿ... ಅಷ್ಟಕ್ಕೇ ಗತಿ ಇಲ್ಲದೆ ನಾನು [illegible] ಹೇಗೆ ಕಟ್ಟಿಕೊಂಡೇನು? ಹೀರೋ ಬಟ್ಟೆ [illegible] ಆರಲಿ! ಎಲ್ಲ, ಆ ಬಾಬಾ ಬುಡನನ ಇಚ್ಛೆ" ಎಂದು ಬಿಕ್ಕುಬಿಕ್ಕಿದರು.

ನಾನು ಕರಗಿದೆ. "ಸ್ವಾಮಿ! ತಾವು ಅನ್ಯಥಾ ಭಾವಿಸಬಾರದು; ಇಕೊ! ಈ ಪೊಟ್ಟಣ ತೆಗೆದುಕೊಂಡು ಹೋಗಿ, ಕಾಫಿ ಕಾಯಿಸಿ ಕುಡಿಯಿರಿ.. ನಿಮ್ಮ ಆತ್ಮಕ್ಕೆ ಶಾಂತಿ ದೊರೆತರೆ, ಅದೇ ನನಗೆ ತೃಪ್ತಿ" ಎಂದೆ. ಎದೆ ಗಟ್ಟಿ ಮಾಡಿಕೊಂಡರು; ಸಂಕಟವನ್ನು ನುಂಗಿದರು. "ಅಗಲಿ! ಥ್ಯಾಂಕ್ಸ್!" ಎನ್ನುತ್ತ, ಪೊಟ್ಟಣವನ್ನು ಅಪ್ಪಿಕೊಂಡರು. ಕೃತಜ್ಞತೆ, ಶೋಕ, ಆತ್ಮಾವಹೇಳನ; ಹರ್ಷ, ಕೋಪ, ಕುತೂಹಲ—ಎಲ್ಲವೂ ಒಮ್ಮೆಲೆ ಅವರನ್ನು ಮುತ್ತಿ ಮೂಕರಾಗಿಸಿತು

ಈಸ್ಟ್ ಸರ್ಕಲ್ ಬಳಿ ಬಸ್ ನಿಲ್ಲಿಸಿ, ಇಳಿದರು. ನನ್ನ ಕಡೆ ಮುಖ ತಿರುಗಿಸುವುದಕ್ಕೂ ಅವರಿಗೆ ಮನಬರದು... ಒಂದೆರಡು ನಿಮಿಷ ಕಳೆದ ನಂತರ, ನನ್ನ ಹಿಂಬದಿಯ ಸೀಟಿನಲ್ಲಿದ್ದ ಮಹಾರಾಯರೊಬ್ಬರು, ನನ್ನ ಬೆನ್ನು ಕೆರೆದು, ನಾನು ಅವರ ಕಡೆ ತಿರುಗಿದಾಗ "ಟೋಪಿ ಇಕ್ಕಿದ ನಿಮಗೆ ಇವತ್ತು, ಆ ಘಟಿಂಗ" ಎಂದರು. ನನಗೆ ಅರ್ಥವಾಗಲಿಲ್ಲ. "ಯಾಕ್ರಿ?" ಎಂದೆ. "ನಿನ್ನೆ ನನ್ನಿಂದ ಇಂಥಾದ್ದೆ ಕತೆ ಹೇಳಿ ಒಂದು ಪೌಂಡು ಚಹದ ಸೊಪ್ಪು ಹೊಡೆದ್ರಾಪ್ರಿ, ಮಗ! ನಿನ್ನೆ ಎಲ್ಲ ಚಹ ಮಾಡೋ ವಿಧಾನನೇ ಒದರುತ್ತಿದ್ದ" ಎಂದರು. "ಅತ ಇಲ್ಲಿ ಬಂದು ಕೂತಾಗಲೇ ನನಗೆ ಎಚ್ಚರಿಕೆ ಕೊಡಬಾರದೇನ್ರಿ?" ಎಂದೆ. "ನಾನು ನಿನ್ನೆ ಬಿದ್ದ ಹಳ್ಳಕ್ಕೆ ಇವತ್ತು ನೀನಂಗೆ ಮತ್ತೊಬ್ಬರು ಬೀಳೋದಂದ್ರೆ ಅದು ನನಗೆ ಖುಷಿಯಲ್ಲವೇನ್ರಪ?" ಎಂದರು.

## ಲಡಖಿಗಳ ಸಾಮಾಜಿಕ ಸಂಪ್ರದಾಯ

ಪಂ. ನೆಹರು ಲಡಖಿಗೆ ಹೋಗಿಬಂದ ಸುದ್ದಿ ಎಲ್ಲರಿಗೂ ಗೊತ್ತಿದೆಯಷ್ಟೆ. ಅದೆಂಥ ರಾಜ್ಯ ಗೊತ್ತೇ? ದ್ರೌಪದಿಯರ ರಾಜ್ಯ! ಒಂದು ಕುಟುಂಬದ ಗಂಡುಮಕ್ಕಳಿಗೆಲ್ಲ ಒಬ್ಬಳೇ ಹೆಂಡತಿ. ಹುಟ್ಟಿದ ಮಕ್ಕಳಿಗೆ ತಾಯಿ ಒಬ್ಬಳಾದರೆ ತಂದೆಯರು ಹತ್ತಾರು!

ಕಾಶ್ಮೀರದ ಹತ್ತಿರವಿದ್ದರೂ ಲಡಖ್ ಅದರಷ್ಟು ಮರ ಗಿಡಬಳ್ಳಿಗಳನ್ನುಳ್ಳದ್ದಾಗಿಲ್ಲ. ಜಗತ್ತಿನ ಬಹು ಎತ್ತರದ ಪ್ರದೇಶಗಳಲ್ಲಿ ಲಡಖ್ ಒಂದು. ಅದರ ಯಾವ ಸ್ಥಳವೂ ಸಮುದ್ರ ಮಟ್ಟಕ್ಕಿಂತ ೮೦೦೦ ಅಡಿಗಳಿಗೆ ಕಡಿಮೆಯಿಲ್ಲ. ವಿಶಾಲವಾದ ಕಲ್ಬಯಲ ಈ ನಾಡಿನಲ್ಲಿ ೩೦೦ ಮೈಲುಗಳ ವರೆಗೆ ಸಿಂಧುನದ ಹರಿಯುತ್ತದೆ. [illegible]

ಬಾಯಿಯ ಒಡವಿನ ಸಮಾಜದಲ್ಲಿ [illegible] ಬಾಹುರ ಅಧಿಕಾರದಲ್ಲಿರುವ [illegible] ದೊಡ್ಡ ಜೋಪೋಗಳೂ (ಧರ್ಮಗುರುಗಳು) ಇದ್ದಾರೆ. ಅವರದೇ ಒಂದು ಸೈನ್ಯ ಎನ್ನಬೇಕು, ಇದ್ದಾರೆ. ಅವರಿಗೆ ಮದುವೆಯಾಗಬಾರದೆಂಬ ನಿಯಮವಿಲ್ಲದಿದ್ದರೂ ಅವರಲ್ಲಿ ಬಹಳ ಜನ ಮದುವೆಯಾಗಿಲ್ಲ. ಬುದ್ಧ ಮೂರ್ತಿಪೂಜೆಯನ್ನು ಹೇಳಲಿಲ್ಲವೆಂದು ಅವರು ಬಲ್ಲರೋ [illegible] ರೆಂಬ ತಿಳಿದಿರಾ? ಅವರ ವಿಹಾರಗಳಲ್ಲಿ [illegible] ವಿಗ್ರಹಗಳಿವೆ; ಅವಕ್ಕೆ ಪೂಜೆ ಪುರಸ್ಕಾರಗಳನ್ನು ಮಾಡಲಾಗುತ್ತದೆ!

ಲಡಖಿನ ರಾಜಧಾನಿ ಲೇಹ್ ವ್ಯಾಪಾರ ಮಾರ್ಗಗಳ ಬಹು ಮುಖ್ಯವಾದ ಕೂಡು ಸ್ಥಳ. ಮಾರ್ಗವೆಂದರೆ ರೈಲು ಮಾರ್ಗವಲ್ಲ, ಮೋಟಾರುಮಾರ್ಗವಲ್ಲ, ಕುದುರೆ [illegible] ಕಾಲುದಾರಿ ಭಾರತ, ಟಿಬೆಟ್, ಯಾರ್ಕಂಡ್ ಮತ್ತು ಪೂರ್ವ ತುರ್ಕಿಸ್ತಾನಗಳಿಂದ ಬರುವವರು ಅಲ್ಲಿ ಕೂಡುತ್ತಾರೆ.

ಹೆಂಗಸರು ಭಾರತದ ಹಳ್ಳಿಯ ಹೆಂಗಸರಂತೆಯೇ ಸ್ವತಂತ್ರರು. ಗಂಡರೊಡನೆ ಎಲ್ಲ ಕಾರ್ಯಗಳಲ್ಲೂ ಭಾಗಿಯಾಗುವವರೂ ಆಗಿದ್ದಾರೆ. ಅಸ್ತ್ರಮಾತ್ರ ಚೇತ್ಕೃತಿಗಳಿಲ್ಲದೆ ಅಲ್ಲಿನ ಜನರು ವಿನೋದಶೀಲರು, ಶಕ್ತಿಶಾಲಿಗಳು ಮತ್ತು ಧಾರ್ಮಿಕ ವ್ಯಕ್ತಿಯುಳ್ಳವರು. ಜೀವ ಕಡಿಮೆಯಿದ್ದುದರಿಂದ ಊಟಕ್ಕೆ ಸಾಕಾಗಬಾರದೆಂದು ತಿನ್ನುವ ಬಾಯಿಗಳನ್ನು ಕಡಿಮೆ ಮಾಡಲು ಆ ಜನರು ಸನ್ಯಾಸ, ಬಹುಪತಿತ್ವ ಮುಂತಾದ ಸಾಧನಗಳ ಮೂಲಕ ಸಂತತಿ ನಿಯಂತ್ರಣ ಮಾಡಿಕೊಂಡಿದ್ದಾರೆ ಎಂಬುದು ಅಧುನಿಕ ಬುದ್ಧಿಯ ವ್ಯಾಖ್ಯಾನ. ವೈಜ್ಞಾನಿಕ ನಾಗರಿಕತೆಯಲ್ಲಿರುವ ಕೃತಕ ಗರ್ಭನಿರೋಧ, ಕೃತಕ ಸಂತತಿ ನಿರೋಧಗಳನ್ನು ಕಲಿಸುವ ಮುಂದಿಗಲ್ಲದೆ ಲಡಖಿಗಳಂಥ ಭಾವಕರಿಗೆ ಉತ್ತ ಬುದ್ಧಿ ಸಲ್ಲತಕ್ಕದ್ದಲ್ಲ. ಅವರು ಹಿಂದೆ ಪಂಚಾಲ (ಇಂದಿನ ರೋಹಿಲ್ಖಂಡ)ದಲ್ಲಿದ್ದ ಬಹುಪತಿತ್ವ ಧರ್ಮವನ್ನು ಇಂದಿಗೂ ಅನುಸರಿಸಿಕೊಂಡು ಬರುತ್ತಿದ್ದಾರೆ ಎನ್ನುವುದು ಸರಿ. ಹೆಂಗಸರು ಚೆನ್ನಾಗಿ ಕುಣಿಯುತ್ತಾರಂತೆ. ಗಂಡಸರಿಗೆ ಕುಣಿಯುವ ರೂಢಿ ಕಡಿಮೆ. ಇದೊಂದು ಮಾತ್ರ ಆ ಸನಾತನ ಜನರು ಅಳವಡಿಸಿಕೊಂಡ ಅಧುನಿಕತೆಯನ್ನಬೇಕಾಯಿತು! ಜೊತೆಗೆ ಅವರಲ್ಲಿ ನೂರಕ್ಕೆ ೯೦ ಜನರು ಸಾಕ್ಷರರು ಎಂಬುದನ್ನೂ ಸೇರಿಸಬಹುದು.

— ಸಮಾಜ ಶೋಧಕ

Reg. No. B. 3148

LICENCE No 3
Licenced to Post without Prepayment

KARMAVEER 8-8-49

## ಹೊಸ ಪುಸ್ತಕಗಳು

# ಪ್ರಗತಿಶೀಲನೆಂದು ಹೇಳಿಕೊಳ್ಳದ ಪ್ರಗತಿಶೀಲ ಕವಿ

ಹೊಸಗನ್ನಡ ಕವಿತೆಗಳ ಭಾವವೇ ಮಸುಕು ಮಸುಕಾಗಿರುತ್ತದೆ; ಅವಕ್ಕೆ ಅನ್ವಯವೇ ಇರುವದಿಲ್ಲ; ಅವುಗಳನ್ನು ವಿದ್ಯಾರ್ಥಿಗಳಿಗೆ ಪಾಠ ಹೇಳುವದೇ ದುಸ್ತರವೆಂದು ದೂರುವವರು ಶ್ರೀ ಬ. ಹೆ. ಶ್ರೀಧರರ ಈಚೆಗಿನ ಕವಿತಾ ಸಂಗ್ರಹವಾದ "ಅಮೃತ ಬಿಂದು"* ವೊಂದನ್ನಾದರೂ ಆ ಸಾಲಿನಿಂದ ಬೇರ್ಪಡಿಸಬೇಕಾಗುವದು. ೪೦ ಪುಟಗಳನ್ನಾವರಿಸಿದ ೫೧ ಕವಿತೆಗಳನ್ನೊಳಗೊಂಡ ಈ ಸಂಗ್ರಹದಲ್ಲಿ ಕವಿ ಹೃದಯವನ್ನು ಮುಟ್ಟಿ ಮಿಡಿದ ಹಲವು ಭಾವಗಳ ನಿಚ್ಚಳವಾದ ರೂಪಗಳನ್ನು ಕಾಣಬಹುದು.

ಶ್ರೀ ನಾಯಕ ವೆಂಕಟರಾಯರು ಇದರ ಅಮ್ಮುಕಟ್ಟಾದ ಮುನ್ನುಡಿಯಲ್ಲಿ ಹೇಳಿದಂತೆ ಶ್ರೀಧರರ ಶೈಲಿಯಲ್ಲಿ ಹೊಸ ಹಳೆಗನ್ನಡಗಳ ಮತ್ತು ಪ್ರಾಚೀನ ಅರ್ವಾಚೀನ ಅಭಿಪ್ರಾಯಗಳ ಸುಂದರ ಸಮನ್ವಯವನ್ನು ಧಾರಾಳವಾಗಿ ನೋಡಬಹುದು. ಅವರು ನಮ್ಮ ಹಳೆಯ ಕಾವ್ಯಗಳನ್ನು ಆಸ್ಥೆಯಿಂದ ಅಭ್ಯಸಿಸಿದ ಕುರುಹುಗಳು ಮಾತ್ರವಲ್ಲದೆ ಆ ವಿಚಾರಧಾರೆಯುಳ್ಳದಿದ್ದರೂ ಅಭಿವ್ಯಕ್ತಿಪದ್ಧತಿಯನ್ನೇ ತಮ್ಮ ಕಾವ್ಯಪ್ರಣಾಲಿಯಲ್ಲಿ ಹೊಸ ಸ್ಥಿತಿಗತಿಗಳಿಗೆ ಅಳವಡಿಸಿಕೊಂಡದ್ದಕ್ಕೆ ಈ ಸಂಗ್ರಹ ಸಾಕ್ಷಿಯಾಗಿದೆ. ಸರಳವಾಗಿ ಓದಬಲ್ಲ ಮತ್ತು ಸಾಮಾನ್ಯ ಶಬ್ದ ಮತ್ತು ಕವಿಸಮಯ ಜ್ಞಾನವುಳ್ಳವನಿಗೆ ಸರಳವಾಗಿ ಅರ್ಥವಾಗಬಲ್ಲ ಶ್ರೀಧರರ ಕವಿತೆಗಳನ್ನು ಓದಿದಾಗ ಆಧುನಿಕ ಕವಿತೆಗಳ ಅರ್ಥಕ್ಲಿಷ್ಟತೆಗೆ ಅವುಗಳ ಹೊಸತನ ಕಾರಣವಲ್ಲ, ಅವುಗಳನ್ನು ರಚಿಸುವವರು ಪರಂಪರೆಯನ್ನು ಬಹುತರವಾಗಿ ದುರ್ಲಕ್ಷಿಸುವದೇ [illegible] ಗೋಚರವಾದೀತು. ಶ್ರೀಧರರ ಶೈಲಿಯಲ್ಲಿ ಸಂಸ್ಕೃತ ಶಬ್ದಗಳು ಮತ್ತು ಹಳೆಗನ್ನಡ ಪ್ರಯೋಗ ವಿಪುಲವಾಗಿ ಬೆರೆತಿದ್ದರೂ ಅದನ್ನು ಎಷ್ಟೂ ಕ್ಲಿಷ್ಟತರವಾಗಿ ಮಾಡಿಲ್ಲ.

ಆದರೆ ಇಲ್ಲಿಗೆ ಆ ಸಾಮ್ಯ ಮುಗಿಯಿತೆಂದು ಹೇಳಬೇಕು. ಅದರಿಂದಾಚೆಗೆ ಶ್ರೀಧರರು ಆಧುನಿಕ, ಅಷ್ಟೇಕೆ, ಅತ್ಯಾಧುನಿಕರೇ ಸರಿ. ಸಮನ್ವಯವೇ ಅವರ ಕಾವ್ಯದ ಮುಖ್ಯ ವೈಶಿಷ್ಟ್ಯವೆಂದೂ ಹೇಳಬಾರದು. ಇತ್ತ ಈ ಭಾವಗೀತಗಳಲ್ಲಿ ಕಾಣಬರುವ ವಿಚಾರ ಸರಣಿಗೂ ಕಲ್ಪನೆಗಳಿಗೂ ಅತ್ತ ಪ್ರಾಚೀನ ಕವಿಗಳ ರೀತಿನೀತಿಗಳಿಗೂ ಅಜಗಜಾಂತರವಿದೆ. ಅದು ಪ್ರೀತಿಯ ವಿಷಯವೇ ಇರಲಿ, ಸೌಂದರ್ಯದ ಸ್ವರೂಪವೇ ಇರಲಿ, ಎಲ್ಲದರಲ್ಲಿಯೂ ಶ್ರೀಧರರು ಹಳೆಯ ನಮ್ಮ ಕವಿಗಳ ಕಲ್ಪನೆಗಳನ್ನು ಮಾತ್ರವೇ ಅಲ್ಲ, ವಿಲಾಸ (Romantic) ಕಾಲದ ಪಾಶ್ಚಾತ್ಯ ಕವಿಗಳ ಭಾವನೆಗಳನ್ನು ಕೂಡ ಅಲ್ಲಗಳೆದು ತಮ್ಮದೇ ದಾರಿ ಹಿಡಿದಿದ್ದಾರೆ. ಮುಗ್ಧತೆಯನ್ನೂ ಸ್ತ್ರೀ ಸೌಂದರ್ಯವನ್ನೂ ಪರ್ಯಾಯ ವಸ್ತುಗಳೆಂದು ಪರಿಗಣಿಸಿದ್ದ ನಮ್ಮ ಹಳೆ ರಸಿಕರ ವಿಚಾರಗಳನ್ನು ಶ್ರೀಧರರು ದ್ವೇಷಿಸುವಷ್ಟು ಮಟ್ಟಿಗೆ ತಿರಸ್ಕರಿಸುತ್ತಾರೆ. ಅಜ್ಞಾನ, ದಡ್ಡತನಗಳ ಬಗ್ಗೆ ಅವರಿಗೆ ಎಳ್ಳಷ್ಟೂ ಸಹಾನುಭೂತಿಯಿಲ್ಲ.

"ಮುಗ್ಧಾತ್ಮರ ಮುಗ್ಧತ್ವವು ಸೌಂದರ್ಯವೆ
ಹೇಳು.
ಔದಾರ್ಯವೆ ಹೇಳು?"

ಎಂದು ಅವರ ಪ್ರಶ್ನೆ. ಅರಿತು ಮಾಡುವ ಪಾಟ, ಬೆರೆಯುವ ಬೇಟಗಳೇ ಆರಾಧ್ಯಗಳು, ಆಸ್ವಾದ್ಯಗಳು:

"ಅರಿವಿನಿಂದ ಮುಂಬಂದು ದಿವ್ಯದೌ-
ದಾರ್ಯವೇರಿ, ಸುಳ್ಳ
ಧಿಕ್ಕರಿಸಿ ನಿಲ್ಲಬಲ್ಲಾತ್ಮ ವಿಶ್ವವ-
ನ್ನಳೆವ ದೊಡ್ಡ ಬಳ್ಳ."

"ಪ್ರೇಮ ವ್ರತ" ವೆಂಬ ಕವಿತೆಯಲ್ಲಿ ಬುದ್ಧಿಜೀವಿಯಾದವನಿಗೆ ಮುಗ್ಧತೆಯಲ್ಲಿ ಸೌಂದರ್ಯವನ್ನಾಗಲಿ ರತಿಯನ್ನಾಗಲಿ ಪಡೆಯುವದು ಎಷ್ಟು ಕಷ್ಟದಾಯಕವೆಂದು ಅವರು ಮನಗಾಣಿಸಿಕೊಟ್ಟಿದ್ದಾರೆ. "ಇಲ್ಲದಲ್ಲಿ ಇರವ ರೂಪಿಸುತ್ತ ಬರುವ ಕುರುಡು ಕಲ್ಪನೆಯನು ಪ್ರತಿಭೆ" ಯೆಂದೊಪ್ಪಲು ಸಿದ್ಧರಿಲ್ಲದ ಅವರು ತಾವು ಹಾಗೆಂದುಕೊಳ್ಳದಿದ್ದರೂ "ಪ್ರಗತಿಶೀಲ" ಪಂಥಕ್ಕೇ ಸೇರಿದವರು. ಅವರಿಗೆ ವಸ್ತುಸ್ಥಿತಿಯೇ ಮುಖ್ಯ, ಕಲ್ಪನೆ, ಊಹೆಗಳು ಎಷ್ಟು ಮಟ್ಟಿಗೆ ತರ್ಕಸಿದ್ಧವಾಗುವವೋ ಅಷ್ಟು ಮಾತ್ರ ಗ್ರಾಹ್ಯ.

"ನಿಜವ ಬಿಟ್ಟು ನಡೆದು
ಊಹೆಯಲ್ಲಿ ತಣಿದು
ಬಂದಹಾಗೆ ಕುಣಿದು
ಕವಿಯು ಕಂಡುದೇನು?
ರಸಿಕನುಂಡುದೇನು?"

ಮುಗ್ಧತೆಯಲ್ಲಿ ರತಿಯನ್ನು ಕಾಣಲಾರದ ಅವರು ಸ್ವಾಭಾವಿಕವಾಗಿ ಅರಿವಿನಿಂದ ಸಂಯತವಾದ ಇಂದ್ರಿಯಗ್ರಾಹ್ಯ ಸುಖವನ್ನು ಮೆಚ್ಚುತ್ತಾರಲ್ಲದೆ ಪಾಶ್ಚಾತ್ಯಕವಿಗಳಲ್ಲನೇಕರನ್ನು ಸೆರೆಹಿಡಿದ ಅತೀಂದ್ರಿಯ ಅಥವಾ Platonic ಪ್ರೇಮ ಅವರನ್ನು ಸೆಳೆಯುವದಿಲ್ಲ. ಯೌವನ ಸಹಜವಾದ "ಎದೆಯ ಹಸಿವಿಸದಮ್ಮ ಕೂಗಿನ ಮಾಧುರೀಪರಿಣಾಮದ ವಿಧಿಗೆ ಬಾಗು" ವುದರಲ್ಲಿ ಯಾವ ಪಾಪವೂ ಇಲ್ಲ. ಇಂದ್ರಿಯ ಚತುಷ್ಟಯದ ಸುಖಗಳು ಗ್ರಾಹ್ಯವಾಗಿದ್ದರೆ,

"ಪಂಚಮೇಂದ್ರಿಯಮಥನುಪೆನಿಸಿತೆ?
ಮುಟ್ಟಿದರೆ ಕೇಡೊದವಿತೆ?"

ಸ್ಪರ್ಶಮೂಲವಾದ ಸುಖಗಳು ಮಾತ್ರ ಏಕೆ ತ್ಯಾಜ್ಯವಾಗಬೇಕು?

ಶ್ರೀಧರ [illegible] ಈ [illegible]ವಾದವೀಗ ಅವರಿಗೆ ಆಧುನಿಕ ಕನ್ನಡ ಕವಿಗಳಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಕೊಟ್ಟಿದೆಯೆಂದು ನಮ್ಮ ಅಭಿಪ್ರಾಯ. ನಿಜವಾದ ಪ್ರಗತಿಶೀಲನಂತೆ ಅವರು ಆತ್ಮಗ್ಲಾನಿ ಅಥವಾ ನಿರಾಶಾವಾದಕ್ಕೆ ವೈರಿಗಳಾಗಿದ್ದಾರೆ. ಒಮ್ಮೆ ನಿರಾಕರಿಸಲ್ಪಟ್ಟು ಮತ್ತೆ ತನ್ನ ಪ್ರೇಮಪಾತ್ರಳಿಂದ ಕರೆಯಲ್ಪಟ್ಟ ಪ್ರಣಯಿಯ ಉತ್ತರವಾದ "ಕಡೆಯ ಉತ್ತರ" ವು ಪ್ರೇಮಿಯಾದವನು ಕೂಡ ಸ್ವಾಭಿಮಾನವನ್ನು ಬಿಡುವಂತಿಲ್ಲವೆಂಬ ಕವಿಯ ವಜ್ರ ಹೃದಯವನ್ನು ತೋರಿಸುತ್ತದೆ. ತನಗೇ ಅತ್ಯಂತ ಯಾತನಾದಾಯಕವಾಗಿದ್ದರೂ ಹೃದಯದಲ್ಲಿ ನಟ್ಟ ಆ ಪ್ರೇಮಶಲ್ಯವನ್ನು ಕಳಕ್ಕನೆ ಕಿತ್ತೊಗೆದು ಆ ಪ್ರೇಮಯಾಚಕಳಿಗೆ

"ತಿರುಕನಾಗಿ ಮನೆಮುರುಕನಾಗಿ ಕಲೆ
ಯರಕವೊಂದ ಸಾಧಿಸಿದ"

ತನಗೇಕೆ ಮೊರೆಯಿಡುವೆಯೆಂದು ನಿರಾಕರಿಸಿ "ಕಾಮಾತುರಾಣಾಂ ನ ಭಯಂ ನ ಲಜ್ಜಾ" ಎಂಬ ಹಳೆಯ ಗಾದೆಯನ್ನು ಸುಳ್ಳುಗಳೆದ ಧೀರ ಪ್ರೇಮಿ ಕವಿಯ ಒಲವಿನ ನಿಕಷವಾಗಿದ್ದಾನೆ.

ಹಾಗೆಂದು ಅವರು ಭಾವನಾಶೂನ್ಯರೆಂದು ಅರ್ಥವಲ್ಲ.

"ಏನನು ಕೊಟ್ಟರು ನೀಡದ ಬಟ್ಟಲೊ
ಳಮೃತವೆ ಅದು ಮಧುಮಾಕ್ಷಿಕವೆ"

"ಅಕ್ಷಿಯಲ್ಲೆ ಕುಳಿತು ಪ್ರೇಮ
ಪಕ್ಷಿ ಕುಕಿಲ ಕಲಿವುದು"

"ಸುಸ್ಮಿತತೆಯ ಸುರರ ನೇಹ ಸಡಿಲ
ಸಡಿಲವೊ;
ಅಸ್ಮಿತತೆಗೆ ಬೆದರಿ ನಿಕ್ಕ ಹತ್ತಿರಿಸುವೆವೊ"

ಎಂಬ ಮೊದಲಾದ ಮಧುರಭಾವನಿಬಿಡವಾದ ವಾಕ್ಯಗಳು ಹೊರಗೆ ಕಲ್ಲಾದರೂ ಒಳಗೆ ಮಿದುವಾದ ಕವಿಹೃದಯದ ದ್ಯೋತಕವಲ್ಲವೆ?

ಪ್ರೇಮವನ್ನು ಬಿಟ್ಟು ದೇಶಭಕ್ತಿ, ರಾಜಕಾರಣ ಮೊದಲಾದ ದೈನಂದಿನ ವಿಚಾರಗಳಲ್ಲಿಯೂ ಶ್ರೀಧರರು ಈ ವಾಸ್ತವಿಕತೆಯನ್ನೆ ಪ್ರದರ್ಶಿಸುತ್ತಾರೆ. ದೌರ್ಜನ್ಯವನ್ನು ಮುರಿಯಬೇಕಾದರೆ ಬರಿ ಸೌಜನ್ಯ ಸಾಲದು. ನೌಖಾಲಿ ಮೊದಲಾದೆಡೆಗಳಲ್ಲಿ ನಡೆದ ಹತ್ಯಾಕಾಂಡಗಳಿಂದ ಉರಿದೆದ್ದು ಅವರು "ಕ್ಷುದ್ರನಾಗಿ ಅವತರಿಸಿ ಬಂದ ನಾ ರುದ್ರನಾಗಲೆಂತು?" ಎಂದು ತವಕಿಸಿದ್ದಾರೆ.

"ಪಾಲುಗಾರಿಕೆಯಿಂದ ಪಾಲಾದ
ನಾಡಿನ 'ಕ
ಪಾಲಿ' ಹಿಡಿದೇಳು ನಿನ್ನ
ಪಾಳುಗೈದತ್ಯಾಚಾರತೆಯ ಬಿಡುಬೀಳ್ವ ಭ
ಸ್ಮಾಸುರರನಿಕ್ಕು ಮುನ್ನ"

ಎಂದು ಅವರು ಕರೆ ಕೊಡುತ್ತಾರೆ.

× × ×

ಶ್ರೀಧರರ ಕಾವ್ಯದಲ್ಲಿ ನಿರರ್ಗಳತೆ ಓಜೋಗುಣಗಳು ಪ್ರಧಾನವಾಗಿವೆ. ಅದರ ಮೇಲೆ ಮುನ್ನುಡಿಕಾರರು ಹೇಳುವಂತೆ ದೇಸಿಯ ಪದ–ಭಾವಗಳ ನೆರಳು ಬಿದ್ದಿದ್ದರೂ ಶ್ರೀಧರರು ಮುಖ್ಯವಾಗಿ ಮಾರ್ಗದ ಅನುಯಾಯಿಗಳೇ ಹೊರತು ದೇಸಿಯವರಲ್ಲ. ಕೆಲ ವಿಧದಿಂದ ಬೇಂದ್ರೆಯವರ ಕವಿತೆಯ ಪ್ರಭಾವ ಅವರ ಮೇಲೆ ಆಗಿದೆ. ಉಷಾಸೂಕ್ತದ "ಹಗಲುಗೊರಳಿಂದ ಬೆಳಕನ್ನು ಹಾಡುತಿಹೆಯಾ?" ಎಂಬದು ಬೇಂದ್ರೆಯವರ "ಮುಗಿಲ ಬಾಯ ಗಾಳಿ ಕೊಳಲ ಬೆಳಕ ಹಾಡ ದೀರಿ" ಎಂಬ ಪಂಕ್ತಿಯನ್ನು ಥಟ್ಟನೆ ನೆನಪಿಗೆ ತರುತ್ತದೆ. ಆದರೆ ಬೇಂದ್ರೆಯವರಂತೆ ಪುಟ್ಟಪೂರಾ ದೇಸಿಯ ಹಾದಿಯನ್ನು ಇವರು ತುಳಿದಿಲ್ಲ. ನಿಜಸೌಂದರ್ಯ ಎಲ್ಲಿದ್ದರೂ ಒಪ್ಪುವ ಮನೋವೈಶಾಲ್ಯವನ್ನಷ್ಟೆ ಇದು ತೋರಿಸುತ್ತದೆ.

ಆದರೆ ಪದಶಕ್ತಿ, ನಿರರ್ಗಳವಾದ ಓಟ ಮೊದಲಾದ ಗುಣಗಳನ್ನು ರಕ್ತಗತ ಮಾಡಿಕೊಂಡಿದ್ದರೂ ಶ್ರೀಧರರ ಕೆಲ ಕವಿತೆಗಳು ಶ್ರುತಿಮಾಧುರ್ಯದಲ್ಲಿ ಕೊರತೆಯನ್ನು ಪ್ರದರ್ಶಿಸುತ್ತವೆ. "ತೀರ್ಪು", "ಪ್ರೇಮವ್ರತ" ಮೊದಲಾದ ಕೆಲ ಅನ್ಯಥಾ ಸುಂದರವಾದ ಕವಿತೆಗಳಲ್ಲಿ ಶಬ್ದಗಳು ಪ್ರಾಯಶಃ ಉದ್ದಕ್ಕೂ ಗದ್ಯದಂತೆ [illegible] ಓಡುವುದರಿಂದ [illegible] ಒರಟೆನಿಸುವವು. ಸಂಸ್ಕೃತ ಶಬ್ದಗಳ ಬಳಕೆ ಅತಿರೇಕವಾಗಿದೆಯೆನ್ನಬಾರ[illegible]ದ್ದರೂ "ಸಮುಲ್ಲಸತ್ಸುಧಾಧರ" ಎಂಬೀ... ಮಾದರಿಯ ಪ್ರಯೋಗಗಳನ್ನು ವರ್ಜಿಸ[illegible] ಆದರೆ ಒಳಿತೆಂದು ತೋರುತ್ತದೆ.

ಆದರೆ ಕಾವ್ಯದ ಬಾಹ್ಯಾಂಗದಲ್ಲಿ ತೋರುವ ಚಿಕ್ಕಪುಟ್ಟ ದೋಷಗಳಿವುಗಳಿಂದ ಕಾವ್ಯಗುಣದ ಹೃದಯಕ್ಕೆ ಬಹಳ ಧಕ್ಕೆಯಾಗಿಲ್ಲ. ಶ್ರೀಧರರು ಹೊಸ ಹಾದಿ ತುಳಿದು ಹೊರಟ ತರುಣರು. "ಅಮೃತ ಬಿಂದು" ಕವನದಲ್ಲಿ ಹೇಳಿದ

"ಬ್ರಹ್ಮಪಟ್ಟದಲಿ ಕುಳಿತು ಸೃಷ್ಟಿಯಲಿ
ಕಂಡ ಕೊರತೆಗಳನು
ಬ್ರಹ್ಮನೇತಕಿಂತೆಸಗಿ ಬಿಟ್ಟ ಛೀ
ತಾಳಲಾರೆನಿದನು–
ಅಲ್ಲ ಹೀಗೆಯೆಂದೊಲುಮೆಗುಂಚದಿಂ-
ದಿಳೆಯ ತಿದ್ದಲೇಳೆ
ಚೆಲ್ಲಿ ಹರಿವ ಕವಿಮನದ ನಲ್ಮೆಯೊಂ-
ದಮೃತಬಿಂದು ಕೇಳೆ!"

ಎಂಬ ಅವರ ಪ್ರತಿಬ್ರಹ್ಮತ್ವಾಕಾಂಕ್ಷೆ ಇನ್ನಷ್ಟು ಪೂರ್ಣವಾಗಿ ಕೈಗೂಡಲಿ!

*ಅಮೃತ ಬಿಂದು: ಕವಿ: ಶ್ರೀ ಬ. ಹೆ. ಶ್ರೀಧರ, ಎಂ. ಎ., ಪ್ರಕಾಶಕರು: ಸಂಯುಕ್ತ-ಕರ್ನಾಟಕ, ಹುಬ್ಬಳ್ಳಿ ರೂ. ೧/೪

## ಆದರ್ಶನಿರೂಪಣೆಯ ಹೊಸ ಕಥೆ

"ವಾಸ್ತವ ಸಾಹಿತ್ಯ" ಎಂಬ ಹೆಸರಿಂದ ಮತ್ತು "ದುರಂತ ವಸ್ತು ವಿನ್ಯಾಸ" ಎಂಬ ಉಲ್ಲೇಖದಿಂದ ಹೊಸಗನ್ನಡದಲ್ಲಿ ಹೊರಟ ಮತ್ತು ಹೊರಡುತ್ತಿರುವ ಪುಸ್ತಕಗಳ ಸಂಖ್ಯೆಯಿಂದು ಅಮಿತವಾಗಿದೆ. ಅಂಥ ಬಹುಸಂಖ್ಯ ಪುಸ್ತಕಗಳಲ್ಲಿ ಅಪೂರ್ವವೂ ಅಕಾರಣವೂ ಆದ ಸಂಗತಿಗಳನ್ನು ಅಸಕ್ತ ಶೈಲಿಯಲ್ಲಿ ವರದಿ ಮಾಡಿರುವುದು ಕಂಡುಬರುತ್ತದೆ. ಆ ಪುಸ್ತಕಗಳಲ್ಲಿ ಕೆಲವಕ್ಕೆ ಸಣ್ಣಕತೆಯೆಂದು, ಮತ್ತೆ ಕೆಲವಕ್ಕೆ ಕಾದಂಬರಿಯೆಂದು, ಮಿಕ್ಕವಕ್ಕೆ ಏಕಾಂಕ ಅನೇಕಾಂತ ನಾಟಕಗಳು, ಹರಟೆಗಳು, ಪ್ರಬಂಧಗಳು ಎಂಬುದಾಗಿ ಕರೆಯುವ ರೂಢಿಯಿದೆ. ಜೀವನದಲ್ಲಿ ಕಾಣಬಹುದಾದ ಅಪೂರ್ವವಾದ, ಸಂದಿಗ್ಧವಾದ, ಕ್ರೋಧಭಾವಪರವಾದ ಚಿತ್ರಗಳನ್ನು ಚಿತ್ರಿಸಿ, ಅಸಂಬದ್ಧ ರೀತಿಯಿಂದ ಹಿಂದಿನಿಂದ ಬಂದ ಪಾತ್ರ, ರೂಢಿ, ಆಚಾರ, ವಿಚಾರಗಳನ್ನು ವಿಡಂಬಿಸುವ ವೈತಂಡಿಕ ವೃತ್ತಿಯನ್ನು ಕಂಡು ಕಂಡು, ಆ ಚರ್ವಿತ ಚರ್ವಣದಿಂದ ಬೇಸತ್ತ ಓದುಗರಿಂದು ಅಭಿಜಾತತೆಯಿಂದ ಕಂಗೊಳಿಸುವ ಶೈಲಿಯಲ್ಲಿ ಶ್ರೀ ಸಾಲಿ ರಾಮಚಂದ್ರರಾಯರು ಆದರ್ಶ ಜೀವನವನ್ನು ವಾಸ್ತವಿಕತೆಯ ಕಟ್ಟಿನಲ್ಲಿ ಹೊಂದಿಸಿ ಬರೆದ ನೀಳ್ಗತೆಯನ್ನು ಕಂಡು ನಿಟ್ಟುಸಿರ್ಗರೆದು ಬೇಸರದಿಂದ ಮುಕ್ತರಾಗಿ ಉಲ್ಲಾಸಗೊಳ್ಳಬಹುದು.

"ಸಂಸ್ಕೃತಿ ಪ್ರಕಾಶನ, ಶ್ರೀನಿಕೇತನ, ಧಾರವಾಡ" ಇವರು ಪ್ರಕಟಿಸಿದ ೯೩ ಪುಟಗಳ, ೧॥ ರೂಪಾಯಿ ಬೆಲೆಯ "ಜಯಗುರುದೇವ" ಎಂಬುದೇ ಮೇಲೆ ಹೇಳಿದ ಕಥೆ. ಅದು ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಕಥಾವಸ್ತುವನ್ನೊಳಗೊಂಡಂತೆ ಭಾಸವಾಗುತ್ತದೆ. ಅದರ ಮಧ್ಯಯುಗೀನತೆಯತ್ತ ಕೆಲ ಆಧುನಿಕರು ಮೂಗುಮುರಿಯಬಹುದು. ಆದರೆ ಆ ಮಧ್ಯಯುಗೀನತೆಯಿರುವದು ಸಂಗತಿಗಳಲ್ಲಷ್ಟೇ ಅಲ್ಲದೆ, ಪಾತ್ರಗಳ ನಡೆನುಡಿ ಆಚಾರವಿಚಾರಗಳಲ್ಲಲ್ಲ. ಅಲ್ಲಿಯ ಮುಖ್ಯ ಪಾತ್ರಗಳೆಲ್ಲ ಬೇರೆ ಬೇರೆ ಮಟ್ಟದ ಉತ್ತಮ ಸಂಸ್ಕೃತಿಸಂಪನ್ನವಾಗಿವೆ. ರಾಮರಾಜ್ಯದ ಕಲ್ಪನೆಯನ್ನು ಮಾಡಿಕೊಡುವಂಥವಿವೆ. ವಿವಿಧ ಸಾಮಾಜಿಕ ವರ್ಗದ ಮನುಷ್ಯರೆಲ್ಲರಲ್ಲೂ ಬುದ್ಧಿಭೇದವಿದ್ದರೂ ಒಂದೇ ವಿಧವಾದ ಉಚ್ಚಮಟ್ಟದ ಹೃದಯಸೌಂದರ್ಯ ಪ್ರಕಾರಗಳಿರುವುದು ಇಂದು ಒತ್ತಟ್ಟಿಗೆ ಒಮ್ಮೆ ದುರ್ಲಭವಾದರೂ ಅಂದು ಕಾಣಲು ದುರ್ಲಭವಾಗಿರಲಿಲ್ಲ.

ಕಥಾನಾಯಕನಾದ ಪದ್ಮನಾಭ ಮತ್ತು ಅವನ ಗುರು ಇವರದೊಂದು ಪಕ್ಷ; ಕಥಾನಾಯಿಕೆಯಾದ ರಾಜಲಕ್ಷ್ಮಿ ಮತ್ತು ಅವಳ ಗುರುವಾದ ಅವಳ ತಂದೆ ಇವರಿಬ್ಬರದೊಂದು ಪಕ್ಷ. ಈಯೆರಡೂ ಪಕ್ಷಗಳಲ್ಲಿ ಸಮವಿತ್ತವಿಲ್ಲದಿದ್ದರೂ ಸಮಶ್ರುತ, ಸಮಸತ್ವ, ಸಮಸಂಸ್ಕೃತಿಯಿರುವುದು ಕಂಡುಬರುತ್ತದೆ. ಸಮಾಜ ಸಮಾಜ ಎಂದು ಸಾಮೂಹಿಕವಾಗಿ ಕೂಗಿ ಆದರ ಅಂಗಗಳಾದ ವ್ಯಕ್ತಿಗಳತ್ತ ದುರ್ಲಕ್ಷ್ಯ ಮಾಡಿ ಸುಧಾರಣೆ ಮಾಡಲು ಹೊರಡುವ ಇಂದಿನ ಸಮಾಜಸುಧಾರಕಾ[illegible] ಗಂಭವನ್ನು ಖಂಡಿಸಲೋ[illegible] ಕಲ್ಪನೆಯ[illegible] ಎಂಬಂತೆ ಅಂಗಸುಧಾರಣೆಯೇ ಅಂಗಿಯ ಸುಧಾರಣೆ, ವ್ಯಕ್ತಿಗಳ ಸಂಸ್ಕಾರೋನ್ನತಿಯೇ ಸಮಾಜ ಶಿಕ್ಷಣ ಎಂಬುದನ್ನು, ಕಥೆಯ ನಾಯಕ ನಾಯಿಕೆಯರ ಗುಣ, ಚಾರಿತ್ರ್ಯ, ವಿದ್ಯೆ, ಬುದ್ಧಿ, ಸಂಸ್ಕಾರ, ಕಾರ್ಯದಕ್ಷತೆಗಳನ್ನು ರೂಪಿಸಿ ನಿದರ್ಶನಕ್ಕೆ ತಂದು ಕೊಡಲಾಗಿದೆ.

ಎರಡನೆಯ ವರ್ಗದ ಪಾತ್ರಗಳಾಗಿ ಬರುವ ವೀರನಾಯಕ ಮತ್ತು ಕಾಳಿಂಗ ದಂಪತಿಗಳ ಜೀವನಕ್ರಮವನ್ನು ಕಂಡರೆ ಭಾಸನ ಪ್ರತಿಮಾನಾಟಕದಲ್ಲಿ ರಾಮ, ಸೀತೆ, ಲಕ್ಷ್ಮಣ, ಭರತರಲ್ಲಿ ಕಂಡುಬರುವ ಬಂಧುತ್ವದ, ಸೌಮ್ಯ ಸೌಹಾರ್ದದ, ಹೃದಯ ಮಾರ್ದವ ಮಾಧುರ್ಯಗಳ ಚಿತ್ರ ನೆನಪಾಗುವುದು. ಈ ಎರಡು ಕುಟುಂಬಗಳಲ್ಲಿ ಯಾವ ಅಸ್ವಾಭಾವಿಕತೆಯು ಲಾಂಛನೆಯೂ ಹೊಳೆಯದಂತೆ ಆದರ್ಶ ಸಂಸ್ಕಾರಸಂಪನ್ನತೆಯನ್ನು ಶ್ರೀ ರಾಮಚಂದ್ರರಾಯರು ಅಳವಡಿಸಿದ್ದಾರೆ.

ಪ್ರತಿನಾಯಕನಲ್ಲಿಯೂ ಪಶ್ಚಾತ್ತಾಪವನ್ನು ಉಂಟು ಮಾಡಬಲ್ಲ ಆತ್ಮಶಕ್ತಿಯನ್ನು ಕಥಾನಾಯಕನಲ್ಲಿ ರೂಪಿಸಿದ ಗುರುದೇವನಂತಹ ಗುರುಗಳ ಆವಶ್ಯಕತೆ ಇಂದಿನ ಸಮಾಜಕ್ಕೆ ಬಹಳ ಹೆಚ್ಚಾಗಿದೆ ಎಂಬ ಅಂಶವನ್ನು ಮನಸ್ಸಿನಲ್ಲಿಟ್ಟುಕೊಂಡೇ ಗ್ರಂಥಕರ್ತರು ಈ ಕಥೆಗೆ "ಜಯಗುರುದೇವ" ಎಂದು ನಾಮಕರಣ ಮಾಡಿದಂತೆ ತೋರುತ್ತದೆ. ನಡುನಡುವೆ ಬರುವ ಭಕ್ತಿಗೀತಗಳು ಸುಂದರ, ಮಧುರ, ಸಾಂದರ್ಭಿಕ ಎಂದು ಎಲ್ಲರೂ ಒಪ್ಪುವಂತಿವೆ.

ಇದನ್ನು "ಕಾದಂಬರಿ" ಎಂದು ಪ್ರಕಾಶಕರೂ ಮುನ್ನುಡಿಕಾರರೂ ಕರೆದಿರುವುದರ ಔಚಿತ್ಯ ಬಹಳ ಸಮರ್ಥನೀಯವಾಗದು; ರಸಪುಷ್ಟಿಯಲ್ಲಿ, ವೈಪುಲ್ಯದಲ್ಲಿ, ಸಂವಿಧಾನದಲ್ಲಿ, ಸಂಗತಿಗಳ ಸಾಂದ್ರತೆಯಲ್ಲಿ ಕಾದಂಬರಿಯ ಗಾಂಭೀರ್ಯ, ಮಟ್ಟ ಇದರದಕ್ಕಿಂತ ಸ್ವಲ್ಪ ಭಿನ್ನವಾಗಿದೆಯೆಂದರೆ ತಪ್ಪಾಗದು. ಅಥವಾ ಹೆಸರಿನಲ್ಲಿ ಮಹತ್ವವೇನಿದೆ? ಬೇಕಾದುದು ಹುರುಳು; ಅದಿಲ್ಲಿದೆ.

* ಬಚ್ಚಾಗಾಂವದಲ್ಲಿ ಐದು ವರ್ಷದ ಬಾಲಕನೊಬ್ಬನನ್ನು ಒಂದು ಹಾಳು ಮನೆಯಲ್ಲಿ ಕೊಲೆಮಾಡಿದ್ದು ಕಂಡುಬಂದಿದೆ. ಅವನ ಕಿವಿ ನಾಲಿಗೆಗಳನ್ನು ಕೊಯ್ದು, ಅಂಗೈಗಳನ್ನು ಸುಟ್ಟು ತಲೆಬುರುಡೆಯನ್ನು ಚೂಪಾದ ಕಲ್ಲಿನಿಂದ ತಿವಿಯಲಾಗಿತ್ತು. ಈ ಬಗ್ಗೆ ಬಂಧಿಸಲ್ಪಟ್ಟ ಹಳ್ಳಿಗನೊಬ್ಬನು ನಿಪುತ್ರನಾಗಿದ್ದನೆಂದೂ ಈ ಬಗೆಯ ಬಲಿಯಿಂದ ದೇವತೆಗಳನ್ನು ಸಂತೋಷಗೊಳಿಸಿ ಮಗನನ್ನು ಪಡೆಯಲಿಚ್ಛಿಸಿದ್ದನಂತೆ. —ನ್ಯಾಶನಲ್ ಹೆರಾಲ್ಡ್

[illegible] ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ಲೋಕಶಿಕ್ಷಣ ಟ್ರಸ್ಟ [illegible]